# ಅಚಲ

ದ್ವೈಮಾಸಿಕ

ಸೆಪ್ಟೆಂಬರ್ 1995 ಬೆಲೆ ರೂ. 2-00

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

30



"ಅಚಲ'' ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ.ಒ./ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸುವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

## ಒಳಗೇನಿದೆ ?




ಲೇಖನ, ಹಣ ಕಳುಹಿಸಬೇಕಾದ ವಿಳಾಸ :—

**ಎನ್. ಗಾಯತ್ರಿ**
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು-560 040





ಚಂದಾ ವಿವರ :

ವಾರ್ಷಿಕ ಚಂದಾ : ರೂ. 15.00
ಆಜೀವ ಚಂದಾ : ರೂ. 150.00
(ಚೆಕ್ ಮೂಲಕ : ರೂ. 160.00
ಸಂಸ್ಥೆಗಳಿಗೆ : ರೂ. 200.00
ಬಿಡಿ ಪ್ರತಿ : ರೂ. 2.00
ವಿಶೇಷ ಪ್ರತಿ : ರೂ. 3.50


## ಅಭಿನಂದನೆ

ಶಾಶ್ವತಿ ಮಹಿಳಾ ಅಧ್ಯಯನ ಕೇಂದ್ರವು ನೀಡುವ ಪ್ರತಿಷ್ಠಿತ ತಿರುಮಲಾಂಬ ಪ್ರಶಸ್ತಿಯನ್ನು ಈ ಬಾರಿ ಹಿಂದಿ ಲೇಖಕಿ ಶ್ರೀಮತಿ ಮೈತ್ರೇಯಿ ಪುಷ್ಪಾ ಅವರು ತಮ್ಮ 'ಇದಂ ನಾ ಮಮ' ಕೃತಿಗೆ ಪಡೆಯಲಿದ್ದಾರೆ.

1995ರ 'ಸದೋದಿತಾ ಪ್ರಶಸ್ತಿ'ಯನ್ನು ವೈದ್ಯಕೀಯ ಸಾಹಿತ್ಯದಲ್ಲಿ ಸಾಧನೆ ಮಾಡಿರುವ ಡಾ॥ ಎಚ್. ಗಿರಿಜಮ್ಮ, ಡಾ॥ ಲೀಲಾವತಿ ದೇವದಾಸ್ ಅವರು ಪಡೆದಿದ್ದಾರೆ. ಇದೇ ಸಂಸ್ಥೆಯು ನೀಡುವ 'ಕರ್ನಾಟಕ ಕಲ್ಪವಲ್ಲಿ' ಪ್ರಶಸ್ತಿಯನ್ನು ಡಾ॥ ಹೆಚ್. ಆರ್. ನಾಗರತ್ನರವರು ಪಡೆದಿದ್ದಾರೆ.

ಸನ್ಮಾನಿತರಿಗೆ 'ಅಚಲ'ದ ಅಭಿನಂದನೆಗಳು.


Printed at Lipi Mudrana, No. 1, Bugle Rock Road Bangalore-4, Published by Dr. G. Ramakrishna on behalf of Jagruthi Mahila Adhyayana Kendra, 26, I Main Road, Vyalikaval, Bangalore-3

Editor : N. Gayathri

# ಸಂಪಾದಕೀಯ

## ವಿಶ್ವ ಮಹಿಳಾ ಸಮಾವೇಶ–ಸಾಧನೆ–ಮಿತಿಗಳು

ಜಗತ್ ವಿಖ್ಯಾತ ಬೃಹತ್ ಗೋಡೆಯ ನೆಲವಾದ ಬೀಜಿಂಗ್‌ನಲ್ಲಿ ವಿಶ್ವ ಮಹಿಳಾ ಚರಿತ್ರೆಯ ಮುಖ್ಯ ಪುಟವೊಂದು ಇತ್ತೀಚೆಗೆ ಬರೆಯಲಾಯಿತು. ಶತಮಾನಗಳಿಂದ ಸುತ್ತುವರಿದಿರುವ ಬಂಧನದ ಗೋಡೆಗಳನ್ನು ಕೆಡವುವ ಪ್ರಕ್ರಿಯೆಯಲ್ಲಿ ನಂಬಿಕೆಯಿರಿಸಿದ್ದ ಜಗತ್ತಿನ ನಾನಾ ಭಾಗದ ಮಹಿಳೆಯರು ಬೀಜಿಂಗ್‌ನಲ್ಲಿ ವಿಶ್ವ ಸಂಸ್ಥೆಯ ವ್ಯವಸ್ಥೆಗೊಳಿಸಿದ್ದ ಮಹಿಳಾ ಸಮಾವೇಶದಲ್ಲಿ ಭಾಗವಹಿಸಿದ್ದರು. ಕಳೆದ ಕೆಲವು ದಶಕಗಳಿಂದ ಬಿರುಸಾಗಿ ಸಾಗಿರುವ ವಿಶ್ವ ಮಹಿಳಾ ಚಳುವಳಿಯು ಸ್ಪಷ್ಟರೂಪ ತಳೆಯುತ್ತಿರುವ ಈ ಸಂದರ್ಭದಲ್ಲಿ ಈ ಸಮಾವೇಶ ಎಲ್ಲ ರೀತಿಯಿಂದಲೂ ಮಹತ್ವದ ಸ್ವರೂಪ ಪಡೆಯಿತು.

ಚೀನದ ಮಹಿಳಾ ಸಮಾವೇಶಕ್ಕೆ ಭಾರತ ಪೂರ್ವಸಿದ್ಧತೆ ನಡೆಸಿದ ಸಂಭ್ರಮವೇ ಈ ಸಮಾರಂಭವನ್ನು ಭಾರತದ ಮಹಿಳಾ ಚಳುವಳಿ ಎಷ್ಟೊಂದು ಗಂಭೀರವಾಗಿ ಸ್ವೀಕರಿಸಿತು ಎಂಬುದನ್ನು ಪ್ರಸ್ತುತ ಪಡಿಸುತ್ತದೆ. ಸರ್ಕಾರೇತರ ಸಂಸ್ಥೆಗಳು ಭಾರತದಲ್ಲಿ ಎರಡು ಗುಂಪುಗಳಾಗಿ ಕಾರ್ಯ ನಿರ್ವಹಿಸಿದವು. ಸ್ವಯಂ ಸೇವಾ ಸಂಘ ಸಂಸ್ಥೆಗಳ ವೇದಿಕೆಯು ಕಳೆದ ಎರಡು ವರ್ಷಗಳಿಂದ ಸುಮಾರು 100 ಕಾರ್ಯಾಗಾರಗಳು ಮತ್ತು ಸಭೆಗಳನ್ನು ಜಿಲ್ಲೆ, ರಾಜ್ಯ, ಪ್ರಾಂತೀಯ ಮತ್ತು ಅಂತರರಾಷ್ಟ್ರೀಯ ನೆಲೆಯಲ್ಲಿ ನಡೆಸಿ ಮಹಿಳೆಯರ ಸಮಸ್ಯೆಗಳನ್ನು ಮತ್ತು ಕಾಳಜಿಗಳನ್ನು ಗುರುತಿಸುವ ಪ್ರಯತ್ನ ನಡೆಸಿತು. ವಿದೇಶಿ ಅನುದಾನ ಪಡೆಯುವ ಸ್ವಯಂಸೇವಾ ಸಂಸ್ಥೆಗಳ ವೇದಿಕೆಯು ನಡೆಸಿದ ಈ ಚಟುವಟಿಕೆಯ ಸ್ವರೂಪ ಮತ್ತು ಉದ್ದೇಶದ ಬಗ್ಗೆ ತಮ್ಮ ಅನುಮಾನವನ್ನು ವ್ಯಕ್ತಪಡಿಸಿದ ಸರ್ಕಾರೇತರ, ಅಖಿಲಭಾರತ ಮಟ್ಟದ ಮಹಿಳಾ ಸಂಘಗಳ ವೇದಿಕೆಯು ಬೇರೆಯದೇ ಕಾರ್ಯಕ್ರಮವನ್ನು ನಡೆಸಿತು. ಭಾರತ ಸರ್ಕಾರ ಬೀಜಿಂಗ್‌ನಲ್ಲಿ ಮಂಡಿಸಲೆಂದು ತಯಾರಿಸಿದ ದಸ್ತಾವೇಜು ಅಸಮರ್ಪಕವಾಗಿದೆ ಹಾಗೂ ಅಪೂರ್ಣವಾಗಿದೆ ಎಂದು ಆರೋಪಿಸಿದ ಏಳು ಅಖಿಲಭಾರತ ಮಹಿಳಾ ಸಂಘಟನೆಗಳ ವೇದಿಕೆಯು, ಸರ್ಕಾರದ ದಸ್ತಾವೇಜಿನಲ್ಲಿ 'ಭಾರತದಲ್ಲಿ ಮೂಲಭೂತವಾದದ, ಕೋಮುವಾದದ ಬೆದರಿಕೆ, ಇದರಲ್ಲಿ ಸರ್ಕಾರದ ಪಾತ್ರ, ಹೊಸ ಆರ್ಥಿಕ ನೀತಿಗಳ ವಿನಾಶಕಾರಿ ಪರಿಣಾಮ, ಜನಸಂಖ್ಯಾ ನೀತಿಗಳಲ್ಲಿನ ಮಹಿಳಾ ವಿರೋಧಿ ಅಂಶಗಳು, ಅಸಮರ್ಪಕ ಶಿಕ್ಷಣ ವ್ಯವಸ್ಥೆ, ಮಾಧ್ಯಮದ ಪಾತ್ರ, ರಾಜಕೀಯ ಅಪರಾಧೀಕರಣ, ಇತ್ಯಾದಿ ವಿಷಯಗಳ ಬಗ್ಗೆ ಮೌನವಾಗಿದೆ. ಅಥವಾ ದುರ್ಬಲವಾಗಿದೆ' ಎಂದಿದ್ದಾರೆ. ಅಷ್ಟೇ ಅಲ್ಲದೆ, ಬಹುರಾಷ್ಟ್ರೀಯ ಕಂಪೆನಿಗಳ ಅನುದಾನದಿಂದ ತಮ್ಮದೇ ರಚನೆಗಳನ್ನು ಸೃಷ್ಟಿಸಿಕೊಂಡು ಭಾರತದ ಮಹಿಳಾ ಚಳುವಳಿಯ ಗೊತ್ತುಗುರಿಗಳನ್ನು ನಿರ್ಧರಿಸುತ್ತಿರುವ ವಿದೇಶಿ ಅನುದಾನ ಪಡೆಯುವ ಮಹಿಳಾ ಸಂಘಟನೆಗಳ ಸ್ವರೂಪವನ್ನು ಖಂಡಿಸುತ್ತಲೇ, ದೇಶದ ಸಾರ್ವಭೌಮತ್ವವನ್ನು ರಕ್ಷಿಸಬೇಕಾದ ಹೊಣೆಯನ್ನು ಮಹಿಳಾ ಚಳುವಳಿಗೆ ವಹಿಸುವ ನಿಲುವನ್ನೂ ಹೊಂದಿದ್ದಾರೆ.

ವಿಶ್ವ ಮಹಿಳಾ ಸಮಾವೇಶದಲ್ಲಿ ಭಾಗವಹಿಸುವ ರಾಷ್ಟ್ರಗಳ ಸರ್ಕಾರಗಳು ತಮ್ಮ ವರದಿಗಳನ್ನು ಆಯಾ ದೇಶಗಳ ಮಹಿಳೆಯರ ಸ್ಥಿತಿಗತಿಗಳನ್ನು ನಿಖರವಾಗಿ ಪ್ರತಿನಿಧಿಸಬೇಕೆಂಬ ಉದ್ದೇಶದಿಂದ, ಸಮ್ಮೇಳನದ ಸಿದ್ಧತಾ ಸಮಿತಿ, ಭಾಗವಹಿಸುವ ಸರ್ಕಾರಗಳಿಗೆ, ಸಮ್ಮೇಳನಕ್ಕೆ ದಸ್ತಾವೇಜುಗಳನ್ನು ತಯಾರಿಸುವ ಮೊದಲು, ಮಹಿಳಾ ಸಂಘಟನೆಗಳೊಡನೆ ಕುಳಿತು ವ್ಯಾಪಕವಾಗಿ ಚರ್ಚೆಗಳನ್ನು ಪ್ರಚೋದಿಸಿ, ಅವರ ಅಭಿಪ್ರಾಯ ತಿಳಿದು

ಕೊಳ್ಳಲು ಸಲಹೆ ಮಾಡಿತ್ತು. ಭಾರತದಲ್ಲಿ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಈ ಜವಾಬ್ದಾರಿ ಕೊಡಲಾಗಿತ್ತು. ಅದು '1994ರ ಕಡೆಯ ಭಾಗದಲ್ಲಿ ಭಾರತ' ಎಂಬ ಒಂದು ದಸ್ತಾವೇಜನ್ನು ತಯಾರಿಸಿತಾದರೂ ಅದನ್ನು ಮಹಿಳಾ ಸಂಘಟನೆಗಳೊಡನೆ ಚರ್ಚಿಸಿ ಸಲಹೆ ಪಡೆಯುವ ಪ್ರಯತ್ನವನ್ನೇನೂ ಮಾಡಲಿಲ್ಲ.

ಇಂತಹುದೇ ಅವ್ಯವಸ್ಥೆ ಬೇರೆ ದೇಶಗಳಲ್ಲೂ ಆಗಿರಲಿಕ್ಕೆ ಸಾಕು. ಆದರೆ ಈ ಎಲ್ಲ ಪ್ರಯತ್ನ, ಕಾರ್ಯಕ್ರಮದ ಫಲಶ್ರುತಿಯೇನೇ ಇರಲಿ, ಹತ್ತು ವರ್ಷಗಳ ಹಿಂದೆ ನೈರೋಬಿಯಲ್ಲಿ ನಡೆದ ಸಮಾವೇಶದ ಸಂದರ್ಭಕ್ಕೂ ಈಗ ಸಮಾವೇಶ ನಡೆಯುತ್ತಿರುವ ಸಂದರ್ಭಕ್ಕೂ ಮಹಿಳೆಯರ ಮನಃಸ್ಥಿತಿಯಲ್ಲಿ ಅಗಾಧ ಅಂತರವಿದೆ. ಈ ಬಾರಿ ಅದು ಹೆಚ್ಚು **ಕ್ರಿಯಾ ಶೀಲ ಕಾರ್ಯಕ್ರಮಗಳಿಗೆ** ಒತ್ತು ಕೊಟ್ಟಿದೆ. ಸಮಾಜದ ಅರ್ಧಭಾಗವಾದ ಮಹಿಳೆಯರನ್ನು ಕಾರ್ಯಕ್ರಮಗಳ ಗುರಿಗಳಾಗಿ ಮತ್ತು ಯೋಜನೆಗಳ ಫಲಾನುಭವಿಗಳಾಗಿ ಗುರುತಿಸುವ ಯೋಜನಾಧಿಕಾರಿಗಳ, ನಿಯಮಾವಳಿಗಳನ್ನು ರೂಪಿಸುವವರ ಸಾಂತ್ವನದ ಮಾತುಗಳಿಗೆ ಮರುಳಾಗದೆ ಒಮ್ಮತದಿಂದ ಕ್ರಿಯಾಶೀಲ ಮೂಲವಾದ ಕಾರ್ಯಕ್ರಮಕ್ಕೆ ಒತ್ತು ಕೊಡುವಲ್ಲಿ ಪ್ರೇರೇಪಿಸಿದೆ. ಈ ಸಮಾವೇಶದಲ್ಲಿ ಮಹಿಳೆಯರು ಒತ್ತಾಯಿಸಿದ್ದು ಮಹಿಳೆಯರಿಗೆ ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಸಮಾನ ಭಾಗವಹಿಸುವಿಕೆ, ಅವರ ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಅವರದೇ ಪಾತ್ರ- ಮುಂತಾದವನ್ನು ಹೆಚ್ಚು ಗಮನಾರ್ಹವಾಗಿ ಚರ್ಚಿಸಲಾಯಿತು.

ವಿಶ್ವ ಸಂಸ್ಥೆಯು ಬೀಜಿಂಗ್‌ನಲ್ಲಿ ನಡೆಸಿದ ಎರಡು ಮಹಿಳಾ ಸಮ್ಮೇಳನಗಳು ಎರಡು ಗುರಿಯನ್ನು ತಮ್ಮ ಮುಂದಿಟ್ಟುಕೊಂಡಿದ್ದವು. ಸರ್ಕಾರಿ ಪ್ರತಿ ನಿಧಿಗಳಿಂದ ನಡೆದ ಸಮಾವೇಶವು ಸೆ. 4ರಿಂದ ಸೆ. 14ರ ವರೆಗೆ ನಡೆದು 'ಸಮಾನತೆ, ಪ್ರಗತಿ ಮತ್ತು ಶಾಂತಿಗಾಗಿ ಕಾರ್ಯಕ್ರಮ'ವನ್ನು ಚರ್ಚಿಸುವ ಮುಖ್ಯ ಉದ್ದೇಶ ಹೊಂದಿತ್ತು. ಇದಕ್ಕೆ ಮುಂಚೆಯೇ ಬೀಜಿಂಗ್‌ನಿಂದ ಸುಮಾರು 50 ಕಿ. ಮೀಟರುಗಳು ದೂರದ ಹಾಯಿರೋ-ಯಿನಲ್ಲಿ ನಡೆದ ಸರ್ಕಾರೇತರ ಮಹಿಳಾ ಸಂಘಟನೆಗಳ ಸಮಾವೇಶದಲ್ಲಿ 185 ದೇಶವನ್ನು ಪ್ರತಿನಿಧಿಸುವ ಸುಮಾರು 3600 ಮಂದಿ ಮಹಿಳೆಯರು ಭಾಗವಹಿಸಿದ್ದರು. ಆಗಸ್ಟ್ 30 ರಿಂದ ಸೆ. 8ರ ವರೆಗೆ ನಡೆದ ಈ ಸಮಾವೇಶವು 'ಮಹಿಳೆಯರ ದೃಷ್ಟಿಯಲ್ಲಿ ವಿಶ್ವದ ಅವಲೋಕನ' ಎಂದು ಚರ್ಚಿಸಿದರು. ವಿಶ್ವ ಸಂಸ್ಥೆಯು ರಚಿಸಿ ಅನುಮೋದಿಸಲಿರುವ ದಾಸ್ತಾವೇಜುಗಳ ಮೇಲೆ ಪ್ರಭಾವ ಬೀರಬೇಕೆಂಬ ಗುರಿಯನ್ನಿಟ್ಟುಕೊಂಡ ಈ ಸಮಾವೇಶದ ಯಶಸ್ಸಿನ ಬಗೆಗೆ ಅನುಮಾನವೇ ಇದ್ದರೂ ವಿಶ್ವದ ನಾನಾ ಭಾಗಗಳಿಂದ ಬಂದ ಮಹಿಳಾ ಸಂಘಟನೆಗಳೊಡನೆ ವಿಸ್ತೃತ ಚರ್ಚೆ ನಡೆಸುವ, ಮಹಿಳಾ ಸಂಘಟನೆಗಳು ಅನುಸರಿಸಬೇಕಾದ ತಂತ್ರದ ಕುರಿತು ಚರ್ಚಿಸುವ ಕಾರ್ಯದಲ್ಲಿ ಯಶಸ್ವಿಯಾದವು.

ಸರ್ಕಾರೇತರ ಸಂಘಟನೆಗಳ ಸಮಾವೇಶದಲ್ಲಿ ಹನ್ನೆರಡು ದಿನವೂ ಹಲವಾರು ಶಿಬಿರಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವಲ್ಲದೆ. ಈ ಸಮಾವೇಶ ಎರಡು ಬಹು ಮುಖ್ಯ ಅಂಶಗಳತ್ತ ಒತ್ತಡ ತಂದಿತ್ತು. ಮಹಿಳೆಯರ ಎಲ್ಲಾ ರೀತಿಯ ದೌರ್ಜನ್ಯ (ಕುಟುಂಬದೊಳಗಿನ ದೌರ್ಜನ್ಯವೂ ಸೇರಿದಂತೆ) ಗಳನ್ನು, ರಾಜ್ಯ ಯಂತ್ರವು ನಡೆಸಿದ ದೌರ್ಜನ್ಯವನ್ನು ಖಂಡಿಸುವ ಗಟ್ಟಿ ಧ್ವನಿಯೆದ್ದಿತು. ಮತ್ತೊಂದು ಮುಖ್ಯ ಅಂಶವೆಂದರೆ, ಹೆಂಗಸರ ಜೀವನದ ಮೇಲೆ ದುಷ್ಪರಿಣಾಮ ಬೀರುವ ರಚನಾತ್ಮಕ ಹೊಂದಾಣಿಕೆಯ ಕಾರ್ಯಕ್ರಮಗಳ ವಿಮರ್ಶೆಯೂ ಈ ಸಂದರ್ಭದಲ್ಲಿ ಮುಖ್ಯ ಚರ್ಚೆಯ ವಿಷಯವಾಯಿತು.

ನೈರೋಬಿಯ ಸಮ್ಮೇಳನಕ್ಕೂ ಬೀಜಿಂಗ್ ಸಮ್ಮೇಳನಕ್ಕೂ ನಡುವೆ ಒಂದು ದಶಕದ ಅವಧಿಯಲ್ಲಿ ಅಂತರ ರಾಷ್ಟ್ರೀಯ ನೆಲೆಯಲ್ಲಿ ಹಲವಾರು ಮಹತ್ತರ ಬದಲಾವಣೆಗಳಾಗಿವೆ. ಜಗತ್ತಿನ ಅಧಿಕಾರ ಶಕ್ತಿಗಳ ಸಮತೋಲನ

ವಿದ್ದ ನೈರೋಬಿ ಸಮಾವೇಶದಲ್ಲಿ ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳ ಚರ್ಚೆಯಲ್ಲೂ ಏಕ ಅಧಿಪತ್ಯ ಕಂಡು ಬರದೆ ಹೆಚ್ಚು ವಿಸ್ತಾರವಾದ, ತಾರ್ಕಿಕ ಚರ್ಚೆ ನಡೆದದ್ದನ್ನು ಸ್ಮರಿಸಬಹುದು. ಸೋವಿಯತ್ ರಾಷ್ಟ್ರ ಮತ್ತು ಹಲವಾರು ಸಮಾಜವಾದಿ ರಾಷ್ಟ್ರಗಳ ಪತನದಿಂದಾಗಿ ರಾಜಕೀಯ ಶಕ್ತಿಯು ಕೇಂದ್ರೀಕೃತವಾಗಿ ವಿಶ್ವ ಮಾರುಕಟ್ಟೆಯ ಗೂಟ ಹಿಡಿದವರೇ ಇಲ್ಲೂ ಅಧಿಪತ್ಯ ವಹಿಸುತ್ತಿದ್ದು, ಕೇವಲ ಬಾಯಿ ಮಾತಿನಲ್ಲಿ ಮಾತ್ರ ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಬೊಬ್ಬೆಯಿಡುತ್ತಿದ್ದನ್ನು ಸಮ್ಮೇಳನದಲ್ಲಿ ಕಾಣಬಹುದಿತ್ತು. ಮಹಿಳಾ ಕಾಳಜಿಯನ್ನು ಕೇವಲ ಬಾಯಿಮಾತಿನಲ್ಲಿ ತೋರಿಸಿದ ಪಾಕಿಸ್ತಾನದ ಪ್ರಧಾನಿ ಶ್ರೀಮತಿ ಬೆನ್‌ಜಿರ್ ಭುಟ್ಟೊ ವಿಶ್ವ ಮಹಿಳಾ ಸಮಾವೇಶದ ವೇದಿಕೆಯನ್ನು ರಾಜಕೀಯ ಪ್ರಚಾರಕ್ಕೆ ಬಳಸಿಕೊಂಡದ್ದು ಸ್ಪಷ್ಟವಾಗಿ ಕಾಣುತ್ತಿತ್ತು. ಅವರು ಸೂಚಿಸಿದಂತೆ ಅತ್ಯಾಚಾರವನ್ನು ಮಿಲಿಟರಿ ಅಸ್ತ್ರವಾಗಿ ಮಹಿಳೆಯರ ಮೇಲೆ ಪ್ರಯೋಗಿಸುವ ಕುತಂತ್ರವನ್ನು ಯಾರಾದರೂ ಖಂಡಿಸಬೇಕೆಂಬ ವಿಷಯಕುರಿತು ಎರಡು ಮಾತು ಇಲ್ಲವಾದರೂ, ಅವರ ದೇಶದಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯಗಳನ್ನು ಕುರಿತಂತೆ ಚಕಾರವೆತ್ತದೆ, ಕೇವಲ ಕಾಶ್ಮೀರದ ರಾಜಕೀಯವನ್ನು ಪ್ರಸ್ತಾಪಿಸಿದ್ದನ್ನು ಭಾರತವು ಖಂಡಿಸಿದ್ದು ಸ್ವಾಗತಾರ್ಹವಾದರೂ ಭಾರತಕ್ಕೆ ತನ್ನ ವಿಚಾರಧಾರೆಯನ್ನು ಸಮರ್ಥಿಸಿಕೊಳ್ಳಲು ಇನ್ನೂ ಹೆಚ್ಚಿನ ಅವಕಾಶಗಳು ಬೇಕಿದ್ದವು.

ಅಮೆರಿಕೆಯ ಮೊದಲ ಮಹಿಳಾ ಪ್ರಜೆ ಶ್ರೀಮತಿ ಹಿಲೇರಿ ಕ್ಲಿಂಟನ್, ತಮ್ಮ ದೇಶದಲ್ಲಿ ನಡಯುತ್ತಿರುವ ಮತ್ತು ತಮ್ಮ ದೇಶವು ಬೇರೆ ದೇಶದಲ್ಲಿ ನಡೆಸುತ್ತಿರುವ ದೌರ್ಜನ್ಯಗಳ ಅರಿವಿಲ್ಲದಂತೆ ಮಹಾದೊಡ್ಡ ಪ್ರಜಾಪ್ರಭುತ್ವ ಮೌಲ್ಯಗಳ ಪ್ರತಿಪಾದಕರಂತೆ ಮಾತನಾಡಿದ್ದು ಮತ್ತು ಚೀನಾದ ಕುಟುಂಬ ಯೋಜನಾ ನೀತಿಯನ್ನು ಟೀಕಿಸಿ ಅದನ್ನೇ ಮಹಿಳೆಯರ ಮೂಲಭೂತ ಹಕ್ಕುಗಳನ್ನಾಗಿ ಮಾತನಾಡದ್ದು ರಾಜಕೀಯ ಕುತಂತ್ರವಾಗಿತ್ತು. ಕಳೆದ ವರ್ಷ ಕೈರೋದಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾ ಸಮಾವೇಶದಲ್ಲಿ ಗರ್ಭಪಾತಕ್ಕೆ ಸಂಬಂಧಪಟ್ಟ ಯೋಜನಾನೀತಿಯನ್ನು ಚರ್ಚಿಸಿ ಒಮ್ಮತವನ್ನು ತಲುಪಿದ್ದರೂ ರಾಜಕೀಯ ಉದ್ದೇಶದಿಂದ ಆ ಸಮಸ್ಯೆಯನ್ನು ಮತ್ತೆ ಬೀಜಿಂಗ್‌ನಲ್ಲಿ ತರಲಾಗಿತ್ತು.

ಭಯೋತ್ಪಾದನೆ ಹೆಚ್ಚುತ್ತಿರುವ ಬಗ್ಗೆ ಕಳವಳ ವ್ಯಕ್ತಪಡಿಸಿದ ಅಲಿಪ್ತದೇಶಗಳು ಇದನ್ನು ತಡೆಯಲು ಸಹಕಾರ ನೀಡಬೇಕೆಂದು ಅಂತರರಾಷ್ಟ್ರೀಯ ಸಮೂಹಕ್ಕೆ ಮನವಿ ಮಾಡಿತು. ಇದನ್ನೇ 'ಬೀಜಿಂಗ್ ಸಂದೇಶ' ಎಂದು ರೂಪಿಸಲಾಗಿದೆ. ಈ 'ಬೀಜಿಂಗ್ ಸಂದೇಶ'ವನ್ನು ರೂಪಿಸುವಲ್ಲಿ ಭಾರತವೂ ಮಹತ್ವದ ಪಾತ್ರ ವಹಿಸಿತು.

ವಿಶ್ವದ ಮಹಿಳೆಯರೆಲ್ಲಾ ತಮ್ಮ ತಮ್ಮ ಸಮಸ್ಯೆಗಳನ್ನು, ಕಾಳಜಿಗಳನ್ನು ಹಂಚಿಕೊಳ್ಳಲು ಬೀಜಿಂಗ್ ಸಮಾವೇಶ ಒಂದು ಅಗತ್ಯ ವೇದಿಕೆಯನ್ನು ನಿರ್ಮಿಸಿತೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಸರ್ಕಾರೇತರ ಸಂಘಟನೆಗಳ ಸಭೆಯು ಸರ್ಕಾರಿ ಮಹಿಳಾ ಸಮಾವೇಶವನ್ನು ಪ್ರಭಾವಿಸುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾದವು ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ. ಆದರೆ ಸರ್ಕಾರಿ ಸಮಾವೇಶದಲ್ಲಿ ಭಾಗವಹಿಸಿದ ಬಹಳಷ್ಟು ಮಹಿಳಾ ನಾಯಕಿಯರು ತಮ್ಮ ಸರ್ಕಾರಗಳ ರಾಜಕೀಯವನ್ನು ಮೆರೆಯಲು ಈ ವೇದಿಕೆಯನ್ನು ದುರುಪಯೋಗ ಪಡಿಸಿಕೊಂಡದ್ದು ಸ್ಪಷ್ಟವಾಗಿ ಕಂಡು ಬಂತು. ಅದು ನಿಜಕ್ಕೂ ಖಂಡನೀಯ.

ಎನ್. ಗಾಯತ್ರಿ

## ಕಾವ್ಯ

### ಕಾಡ ಹುಡಿಗಿಯರೆ ಹೇಳಿ

ಯಾವ ಚುಕ್ಕೆ ಬಿಸಿಲ ಪರಾಗ ಸೆಲೆ ಗಂಧ
ಯಾವ ಮಳೆಬಿಸುಪು ಗಾಳಿಯುಹಾಡು
ಯಾವ ಜೇನಿನ ರೆಕ್ಕೆತಾಳಕ್ಕೆ ಮಧುಹಿಡಿದು
ಹೊರಟಿರೇ ಕಾಡ ಹುಡುಗಿಯರೆ ಹೇಳಿ

ಕನಸಿನ ಬಿತ್ತುಗಳಲ್ಲಿತ್ತೆ ಎದೆಯ ಒಡೆತನದ ಬಯಕೆ ?
ಅರಸು ಗುವರರ ಸಾಮ್ರಾಜ್ಯ ಬಯಕೆ ?
ಅವನಿಟ್ಟ ಹೆಜ್ಜೆ ಜಾಡುತಪ್ಪದ ನಡತೆ ?
ಏನಿತ್ತು ನಿಮ್ಮ ಬಯಕೆ ?

ಇರಲಿಲ್ಲವೆ ಇಲ್ಲಿ ನಗರ ಕೋಟೆಗಳಲ್ಲಿ
ಗರತಿ ಹಾಡಿನ ಸುವ್ವಿ ಅಳುವ ಕಂದನ ಹಸಿವು ?
ಮಲಗಲು ಕೂಡಲು ನಿಯಮದ ಸುಪ್ಪತ್ತಿಗೆ ಚಾಪೆ
ಏನಿತ್ತು ಅಂಥ ಕೊರತೆ ?

ಯಾವ ರಾಮನೋ ನಳನೋ ಸತ್ಯವಂತ
ಸೂರೆಗೈದದ್ದಕ್ಕೆ ಹೃದಯ ಕುಂಭ
ಕಾಲಿಟ್ಟಲ್ಲಿ ರಕ್ತದೊಸರಿನ ಹಾದಿ ಹಿಡಿದಿರೆ ?
ಪೊತ್ತಿರೆ ಮಂಜುಗಣ್ಣಲಿ ಸಂಕಟದ ಬೆಟ್ಟ ?

ಮಣ್ಣಾದ್ದಕ್ಕೆ ದೊರಕುವ ಗರತಿ ಪಟ್ಟಕ್ಕೆಂದೆ ?
ಇರಲಾರದು, ಇದ್ದಿರಬೇಕು ನಿಮ್ಮ ಹಸಿಎದೆಗಳಲ್ಲು
ಸಾವಿರ ಚಂದ್ರರಿಗೆ ತೆರೆದು ತೋಳಲ್ಲಿ ಲಾಲಿಹಾಡುವ
ಕಡಲವ್ವನ ಮೊರೆತ. ಕನಸ ಪದರಗಳಲ್ಲಿ
ಕ್ಷಿತಿಜ ತಬ್ಬುವ ಅಥವ ಸುಮ್ಮನೆ ಪ್ರಕೃತಿಯಪ್ಪುವ
ಬಯಕೆ.

ಏನಿತ್ತೆ ಹೇಳಿರೆ, ಯಾವ ಬೆಂಕಿ ಹೊಕ್ಕು ಏನ
ಕಂಡಿರಿ ನೀವು ?
ಸಾವಗೆಲ್ಲುವ ಬಯಕೆ ದಕ್ಕಿತೇನು ?
ಯಾವ ದೇವ ನುಡಿದ ನಿಮ್ಮ ಮಾನಕೆ ಸಾಕ್ಷಿ ?
ಯಾವ ಸಾಧನೆ ಕಂಡದ್ದು ಯಾವ ತೀರ ?

ಗೆದ್ದಿರಿ ನಿಜ. ಸತ್ತರೂ ಬಿಡದ ನೆರಳಾಗಿ
ತೊರೆದೆವೆಂದವರ ರೂಪ ನಾಮ ಧರಿಸಿ
ಉಸಿರಾಡುವಿರಿ ಕಣ್ಣಹನಿಗಳಾಗಿ.
ಹುಟ್ಟಿಸಿದ ಅಪ್ಪಂದಿರ ಕನಸಿನಾದರ್ಶಗಳೆ
ನಿಮ್ಮ ಶಾಶ್ವತಬೆಲೆಗೆ ಇಲ್ಲಿ ಪ್ರಾಣದಂಡ.

**ಸುಮಿತ್ರ**

## ಅಭಿನಂದನೆ

ಬೀಜಿಂಗ್‌ನ ವಿಶ್ವ ಮಹಿಳಾ ಸಮಾವೇಶದಲ್ಲಿ ಪ್ರದರ್ಶಿಸಲೆಂದು ಮಹಿಳೆಯರಿಗೆ ಸಂಬಂಧಪಟ್ಟ ಹತ್ತು ಅತ್ಯುತ್ತಮ ಸಾಕ್ಷ್ಯ ಚಿತ್ರಗಳನ್ನು ಆಯ್ಕೆಮಾಡಲು ವಾಷಿಂಗ್‌ಟನ್ನಿನ AIT (Appropriate Technology International) ಸಂಸ್ಥೆಯು ಆಹ್ವಾನಿಸಿತ್ತು. ಈ ಸ್ಪರ್ಧೆಯಲ್ಲಿ ಭಾಗವಹಿಸಿದ ಕರ್ನಾಟಕದ ಮಾಧ್ಯಮ ಕಲಾವಿದರಾದ ಶ್ರೀ ರೆಹಮಾನ್ ಪಾಷಾ ಅವರ 'Courage in close up' ಚಿತ್ರವು ನಾಲ್ಕನೆಯ ಸ್ಥಾನ ಪಡೆದಿದೆ ಮತ್ತು ಬೀಜಿಂಗ್‌ನಲ್ಲಿ ಸಾವಿರಾರು ಪ್ರತಿನಿಧಿಗಳ ಮುಂದೆ ಪ್ರದರ್ಶಿತವಾಗಿದೆ. ಶ್ರೀ ಪಾಷಾ ಅವರಿಗೆ 'ಅಚಲ'ದ ಅಭಿನಂದನೆಗಳು.

# 'ಮಿತಾಕ್ಷರಾ'ದಲ್ಲಿ ಮಹಿಳೆ

ಡಾ|| ಜ್ಯೋತ್ಸ್ನಾ ಕಾಮತ್

ಮನುಸ್ಮೃತಿ,ಯಾಜ್ಞವಲ್ಕ್ಯ ಸ್ಮೃತಿಗಳು ಭಾರತೀಯ್ರರಿಗೆ ಧಾರ್ಮಿಕ, ಸಾಮಾಜಿಕ, ನೈತಿಕ ವಿಚಾರಗಳಲ್ಲಿ ದೈನಂದಿನ ವ್ಯವಹಾರಗಳನ್ನು ನಿರ್ದೇಶಿಸುವ ಕೈ ಪಿಡಿಗಳಾಗಿ ಅನೇಕ ಶತಕಗಳಿಂದ ಮಾರ್ಗದರ್ಶನ ನೀಡಿವೆ. ಆಳರಸರಿಗೆ ವಿವಿಧ ಹೊಣೆಗಳ, ಅವುಗಳ ನಿರ್ವಹಣೆಯ ಕುರಿತಾದ ನಿರ್ದೇಶನ ಕೊಟ್ಟರೆ, ಸಾಮಾನ್ಯರಿಗೆ ಸಂಕಟ ಪ್ರಸಂಗಗಳಲ್ಲಿ ವ್ಯವಹಾರಿಕ ಸಲಹೆ ಸೂಚನೆಗಳನ್ನು ಒದಗಿಸುತ್ತವೆ.ಮನುಸ್ಮೃತಿಯ ಕಾಲ ಕ್ರಿ.ಶ.ಪೂ 200ನೇ ವರ್ಷವಾದರೆ ಯಾಜ್ಞವಲ್ಕ್ಯ ಸ್ಮೃತಿಯ ಕಾಲ ಕ್ರಿ.ಶ.ಸು 200ನೇ ವರ್ಷವೆಂದು ಪರಿಗಣಿಸುತ್ತಾರೆ. ಕಾಲಕಾಲಕ್ಕೆ ಈ ಸ್ಮೃತಿಗಳಿಗೆ ವ್ಯಾಖ್ಯಾನಕಾರರು ತಮ್ಮ ಕಾಲಕ್ಕೆ ಅನುಗುಣವಾಗಿ ಟೀಕೆಯನ್ನು ಬರೆದರು. ಯಾಜ್ಞವಲ್ಕ್ಯ ಸ್ಮೃತಿಗೆ ಬರೆದ ಟೀಕೆಗಳಲ್ಲಿ ಕನ್ನಡಿಗನಾಗಿದ್ದ ವಿಜ್ಞಾನೇಶ್ವರನು ಬರೆದ ಮಿತಾಕ್ಷರಾ (ಕ್ರಿ.ಶ. ಸು1100) ಎಂಬ ಕೃತಿ ತುಂಬ ಪ್ರಸಿದ್ಧವಾದದ್ದು. ಹಿಂದೂಕೋಡ್ ಬಳಕೆಯಲ್ಲಿ ಬರುವವರೆಗೆ, ಅಂದರೆ ಸುಮಾರು 800 ವರ್ಷಗಳಿಗೂ ಮಿಕ್ಕಿ ಭಾರತದಲ್ಲೆಲ್ಲ ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಉತ್ತರ ದೊರಕಿಸುವ ಪ್ರಮಾಣ ಗ್ರಂಥವಾಗಿತ್ತು ಇದು. ಮಹಿಳೆಯರಿಗೆ ಸಂಬಂಧಿಸಿದಂತೆ ಉಲ್ಲೇಖಿಸಿದ ಕೆಲವಿಚಾರಗಳನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ.

**ವಿವಾಹ :** ವಿದ್ಯಾಭ್ಯಾಸ ಮುಗಿಸಿ ಸ್ನಾತಕನಾದ ತರುಣನು, ಅಸಪಿಂಡಾ (ಅಸಗೋತ್ರ) ಅರೋಗಿಣಿ ಭ್ರಾತೃಮತಿ (ಸೋದರರಿದ್ದದಳು) ವಯಸ್ಸಿನಲ್ಲಿ ಕಿರಿಯಳು ಮತ್ತು ಅನ್ಯಗೋತ್ರದ ಹುಡುಗಿಯನ್ನು ವರಿಸಬೇಕಾಗಿತ್ತು ಅಸಪಿಂಡಾ ಕನ್ಯೆಗೆ ತಂದೆ-ತಾಯಿಗಳ ಕಡೆಯಿಂದ ೭ ಮತ್ತು ೫ ತಲೆಮಾರುಗಳ ಅಂತರವಿರಬೇಕಾಗಿತ್ತು. ಆರೋಗ್ಯಕರ ಸಂತಾನವನ್ನು ಲಕ್ಷದಲ್ಲಿಟ್ಟುಕೊಂಡು ಈ ನಿಯಮ ಹಾಕಿದಂತಿದೆ. ಅದಾಗಲೇ ಬಾಲ ವಿವಾಹ ಬಳಕೆಯಲ್ಲಿ ಬಂದಿದ್ದರೂ ಕನ್ಯೆಯ ವಯಸ್ಸು ಎಷ್ಟಿರಬೇಕೆಂದು ವಿಜ್ಞಾನೇಶ್ವರ ಹೇಳುವದಿಲ್ಲ. ಬ್ರಾಹ್ಮಣ, ವೈಶ್ಯರಲ್ಲಿ ಮೈ ನೆರೆಯುವ ಮುನ್ನ ಮದುವೆ ಕಡ್ಡಾಯವಾಗಿದ್ದರೆ ಕ್ಷತ್ರಿಯರಲ್ಲಿ ಕಿಶೋರಾವಸ್ಥೆಯ ಮದುವೆಗಳು ರೂಢಿಯಲ್ಲಿದ್ದವು. ಮದುವೆಯಾಗಿ ತಂದೆಯ ಮನೆಯಲ್ಲಿ ಇರುವ ಬಾಲಿಕೆಯರಿಗೆ 'ಸ್ವವಾಸಿನಿ' ಎನ್ನುತ್ತಿದ್ದರು. ವಿವಾಹವು 'ಕನ್ಯಾದಾನ'ವೆಂದು ದೃಢವಾದ ನಂಬಿಕೆಯಿದ್ದು. ಈ ದಾನದಿಂದ ಚ್ಯುತರಾದ ಪಾಲಕರಿಗೆ ಭ್ರೂಣಹತ್ಯೆಯ ಪಾಪ ತಗಲುತ್ತಿತ್ತು !

> **ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿಗಳು ಭಾರತೀಯರಿಗೆ ಧಾರ್ಮಿಕ ಸಾಮಾಜಿಕ, ನೈತಿಕ ವಿಚಾರಗಳಲ್ಲಿ ದೈನಂದಿನ ವ್ಯವಹಾರಗಳನ್ನು ನಿರ್ದೇಶಿಸುವ ಕೈಪಿಡಿಗಳಾಗಿ ಅನೇಕ ಶತಕಗಳಿಂದ ಮಾರ್ಗ ದರ್ಶನ ನೀಡಿವೆ. ಆಳರಸರಿಗೆ ವಿವಿಧ ಹೊಣೆಗಳ, ಅವುಗಳ ನಿರ್ವಹಣೆಯ ಕುರಿತಾದ ನಿರ್ದೇಶನ ಕೊಟ್ಟರೆ. ಸಾಮಾನ್ಯರಿಗೆ ಸಂಕಟ ಪ್ರಸಂಗಗಳಲ್ಲಿ ವ್ಯವಹಾರಿಕ ಸಲಹೆ ಸೂಚನೆಗಳನ್ನು ಒದಗಿಸುತ್ತವೆ. ಮಹಿಳೆಯರಿಗೆ ಸಂಬಂಧಿಸಿದಂತೆ ಉಲ್ಲೇಖಿಸಿದ ಕೆಲವಿಚಾರಗಳನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ.**

**ವಿಧವೆಯರ ಪಾಡು :** ಕ್ರಿಸ್ತಶಕದ ಆರಂಭದಲ್ಲೇ ವಿಧವಾ ವಿವಾಹ ನಿಂತುಹೋಗಿ ಸನ್ಯಸನದ ಜೀವನ ವಿಧವೆಯರಿಗೆ ಕಡ್ಡಾಯವಾಗಿತ್ತು. ಆದರೆ ಮಿತಾಕ್ಷರಾದಲ್ಲಿ ಮುಂಡನದ ಪ್ರಸ್ತಾಪವಿಲ್ಲ. ಬಹುಶಃ ಮುಸ್ಲಿಂ ಆಕ್ರಮಣದ ನಂತರ ಸಾಮಾಜಿಕ ಕಟ್ಟು ಪಾಡುಗಳು ಬಿಗಿಯಾಗುತ್ತ ನಡೆದು ಬ್ರಾಹ್ಮಣರಲ್ಲಿ ಮುಂಡನ ಅಥವಾ ಕೇಶವಪನ ಪದ್ಧತಿ ರೂಢಿಯಲ್ಲಿ ಬಂದಿತು.

14ನೇ ಶತಕದ ಸ್ಮೃತಿ ಗ್ರಂಥಗಳಲ್ಲಿ ಮಾತ್ರ ಈ ರೂಢಿ ಕಾಣಿಸಿಕೊಂಡಿದೆ.

**ಸಹಗಮನ ಅಥವಾ ಸತಿಗಮನ ಪದ್ಧತಿ :**

ಅನಾರ್ಯವಾದ ಈ ಪದ್ಧತಿ ತುಂಬ ಪ್ರಾಚೀನ ಕಾಲದಲ್ಲಿ ಭಾರತವನ್ನು ಪ್ರವೇಶಿಸಿ ಜನಪ್ರಿಯವಾಯಿತು. ಮೊದಲು ಕ್ಷತ್ರಿಯರಲ್ಲಿ, ನಂತರ ಯಾವ ವರ್ಣದವರೇ-ಆಳರಸರಾಗಿದ್ದರೆ, ಅವರಲ್ಲಿ, ಮಡಿದ ಪತಿಯೊಂದಿಗೆ ಸತಿಯು ಚಿತೆಯನ್ನೇರುವದು ಪ್ರತಿಷ್ಠೆಯು, ವಂಶದ ಔನ್ನತ್ಯದ ಸಂಕೇತವಾಗಿ ಪರಿಣಮಿಸಿತು. ಸ್ತ್ರೀಯು ಮಹಾಸತಿಯಾಗಿ ಚಿರಂತನವಾಗಿ ಪೂಜಿಸಲ್ಪಡುತ್ತಿದ್ದುದು ಕಲ್ಲು ಮನಸ್ಸಿನ ಹಲವಾರು ಮಹಿಳೆಯರನ್ನು ಈ ಘೋರ ಮರಣಕ್ಕೆ ಪ್ರಚೋದಿಸುತ್ತಿದ್ದಿರಬಹುದು. ಅಲ್ಲದೇ ಬದುಕಿ ಉಳಿದ ದುರ್ದೈವಿಗೆ ಸನ್ಯಸನದ ಕಠಿಣ ಜೀವನ ಇನ್ನೂ ದುರ್ಬರವಾಗಿದ್ದರಿಂದ ಸಾಕಷ್ಟು ಜನ ಸತಿ ಹೋಗುತ್ತಿದ್ದಿರಬಹುದು. ಮಿತಾಕ್ಷರಾ ರೂಪ ಗೊಳ್ಳುತ್ತಿದ್ದ ಕಾಲಕ್ಕೆ ವರ್ಣಭೇದವಿಲ್ಲದೇ ಸ್ತ್ರೀಯರು ಸಹಗಮನ ಅಥವಾ ಅನುಮರಣ (ಪತಿಯನ್ನು ಹಿಂಬಾಲಿಸಿ ಇನ್ನೊಂದು ಚಿತೆಯನ್ನು ಪ್ರವೇಶಿಸುವದು) ವನ್ನು ಕೈಕೊಳ್ಳುತ್ತಿರಲು ಸಾಕು. ಹೀಗಾಗಿ ವಿಜ್ಞಾನೇಶ್ವರನು ಜಾತಿಭೇದವಿಲ್ಲದೇ ಎಲ್ಲ ವರ್ಣದ ಮಹಿಳೆಯರು, ಪಂಚಮ ವರ್ಣದ ಚಾಂಡಾಲಿಯರೂ ಸಹ ಸಹಗಮನ ಮಾಡಲಿ ! ಎಂದು ಔದಾರ್ಯಭಾವ ತೋರಿದ್ದಾನೆ. ಸತಿ ಹೋಗುವವಳ ಸಮಸ್ತ ಕುಲಗಳ ತಂದೆಯ ಕುಲ–ತಾಯಿಯ ಕುಲದ–ಪತಿಯ ಕುಲದ ಅಸಂಖ್ಯ ಪಿತೃಗಳು ಸ್ವರ್ಗದಲ್ಲಿ ನಲಿಯುತ್ತಾರೆ. ಅದು ಆತ್ಮಘಾತವಲ್ಲ. ಮೋಕ್ಷ ವಿಧಾನ ಎಂದು ಪರಿಪರಿಯಿಂದ, ಸತಿಹೋಗಲು ಈ ಮೊದಲ ಸ್ಮೃತಿಕಾರರ ಅಭಿಪ್ರಾಯಗಳನ್ನು ಉದ್ಧರಿಸಿ ಮಹಿಳೆಯರನ್ನು ಪ್ರೇರೇಪಿಸಿದ್ದಾನೆ. ಗಂಡ ಸತ್ತಾಗ ಸಾವನ್ನು ಎದುರಿಸುವವಳೇ ನಿಜವಾದ ಪತಿವ್ರತೆ, ಎಂದು ಸಾರಿ ಸಾರಿ ಹೇಳಿದಾಗ, ಈ ಆದರ್ಶ ಸಾಧಿಸುವ ಧೈರ್ಯಶಾಲಿಗಳು ಇದ್ದೇ ಇದ್ದರು.

ಹಲವಾರು ವಿಷಯಗಳಲ್ಲಿ ಉದಾರಿಯಾದ ವಿಜ್ಞಾನೇಶ್ವರ, ಸಹಗಮನ ವಿಷಯದಲ್ಲಿ ಈ ಕಠೋರ ನಿಲುವು ತಳೆದದ್ದು ವಿಸ್ಮಯಕಾರಿಯಾಗಿದೆ. ಆದರೆ ಸಮಕಾಲೀನ ಶಾಸನಗಳಾಗಲಿ, ಚಾರಿತ್ರಿಕ ಇತರ ಅಂಶಗಳಾಗಲಿ ಸಹಗಮನ ಪದ್ಧತಿಯು ಕರ್ನಾಟಕದಲ್ಲಿ (ರಾಜಸ್ಥಾನದಂತೆ) ಜನಪ್ರಿಯವಾಗಿದ್ದನ್ನು ಹೇಳುವುದಿಲ್ಲ .ಕನ್ನಡಿಗರಿಗೆ ಅತ್ತಿಮಬ್ಬೆಯ ಜೀವನ ಚಿರಪರಿಚಿತ. ಧರ್ಮ, ಸಂಸ್ಕೃತಿ, ಸಾಹಿತ್ಯಗಳ ಪೋಷಕಳಾಗಿ ಆಕೆ ಮಿಂಚಿದ್ದು, ಸತಿ ಹೋಗದೇ ಇರಲು ನಿರ್ಧರಿಸಿದ್ದೇ ಕಾರಣ. ಇಂಥ ಅನೇಕ ಮಹಿಳೆಯರಿದ್ದರೂ ಕೇವಲ ಆಳುವ ವರ್ಗದವರ ಉದಾಹರಣೆಗಳಷ್ಟೇ ನಮ್ಮ ಪಾಲಿಗೆ ಉಳಿದಿವೆ.

**ಪರಾಧೀನತೆ** : 'ತ್ವಚಿದಪಿ ಸ್ತ್ರೀಣಂ ನೈವ ಸ್ವಾತಂತ್ರ್ಯಂ' ಎಂಬ ಯಜ್ಞವಲ್ಕ್ಯ ಸ್ಮೃತಿಯ ವಾಕ್ಯವು ಮನುವಿನ 'ನಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂಬ ಅಭಿಪ್ರಾಯವನ್ನೇ ಎತ್ತಿ ಹಿಡಿಯುತ್ತದೆ. ರಕ್ಷಣೆಯೆಂದರೆ ತಂದೆ, ಪತಿ ಮುಂತಾದವರು 'ಅಕಾರ್ಯಕರಣಾತ್ ರಕ್ಷೇತ್' ಅರ್ಥಾತ್ ಸಲ್ಲದ ಚಟುವಟಿಕೆಗಳಿಂದ ಸ್ತ್ರೀಯರನ್ನು ರಕ್ಷಿಸಬೇಕು ಎಂದು ಹೇಳಿದೆ. ಆದರೆ ಆ ಸಲ್ಲದ ಚಟುವಟಿಕೆಗಳನ್ನು ಹೆಸರಿಸಿಲ್ಲ ! ಒಂದಾನು ವೇಳೆ ಹೆಸರಿಸಿದ್ದರೂ ಅವನ್ನು ನಿರ್ಧರಿಸುವವರು ಗಂಡಸರೇ ಅಲ್ಲವೇ ?

ಬಹು ಪತ್ನಿತ್ವ ರೂಢಿಯಲ್ಲಿತ್ತು. ಆದರೂ ಬಲವಾದ ಕಾರಣಗಳಿಲ್ಲದೇ ಎರಡನೇ ಮದುವೆ ಮಾಡಿಕೊಳ್ಳುವಂತಿರಲಿಲ್ಲ. ಮದ್ಯವ್ಯಸನಿ ರೋಗಿಷ್ಠ. ಧೂರ್ತೆ ಬಂಜೆ, ಹಣದುಂದು ಮಾಡುವವಳು, ಬರೇ ಹೆಣ್ಣು ಹಡೆಯುವವಳು. ಪುರುಷದ್ವೇಷಿಗಳ ಗಂಡಂದಿರು ಮರುಮದುವೆ ಮಾಡಿಕೊಳ್ಳ ಬಹುದಾಗಿತ್ತು. ಬಂಜೆತನಕ್ಕೆ ಕೇವಲ ಹೆಣ್ಣು ಕಾರಣವಲ್ಲ ಎಂದು ದೃಢಪಡದ ಮತ್ತು ಹೆಣ್ಣು ಸಂತಾನ ತಪ್ಪಿಸಲು ಸಾಧ್ಯ ಎಂದು ಅರಿಯದ ಯುಗದಲ್ಲಿ ಹೆಣ್ಣಿಗೇ ಅನ್ಯಾಯ ಕಟ್ಟಿಟ್ಟದ್ದು ! ಭ್ರೂಣಹತ್ಯೆ ಮಹಾಪರಾಧವೆಂದು ಪರಿಗಣಿಸಲ್ಪಟ್ಟಿತ್ತು. ಗಂಡು ಸಂತತಿ ಅತಿಮುಖ್ಯ. ಪಿಂಡದಾನ ಕಡ್ಡಾಯ ಮನೆತನ ಮುಂದುವರಿಯಬೇಕು. ಸಮಾಜ ದುರ್ಬಲವಾಗಬಾರದು, ಈ ವಿಚಾರಗಳೇ ಸ್ಮೃತಿಕಾರರಿಗೆ ಮುಖ್ಯವಾಗಿದ್ದವು. ಸಜೀವ ಹೆಂಡತಿಯನ್ನು ಗಂಡನ ಶವದೊಂದಿಗೆ ಸುಡಲು ಸಿದ್ಧರಿದ್ದ ಜನ, ಹೆಂಡತಿ ಯೇನಕೇನ ಕಾರಣದಿಂದ ಮೃತಳಾದರೆ, ಅವಳನ್ನು

ದಹನ ಮಾಡಿ ಬಂದು ಆಕೂಡಲೇ (ಅವಿಲಂಬಯನ್) ಗಂಡನಾದವನು ಮರು ಮದುವೆ ಮಾಡಿಕೊಳ್ಳಬೇಕು, ಎಂದು ವಿಧಿಸಿದ್ದಾರೆ. ಅದಕ್ಕೆ ಕಾರಣವನ್ನೂ ಮಿತಾಕ್ಷರಾ ಕೊಡುತ್ತದೆ. ಸಂಸಾರದ ಬಗ್ಗೆ ಗೃಹಸ್ಥನು ಪೂರ್ಣ ವಿರಕ್ತನು ಆಗುವದಿಲ್ಲ. ಆತನ ಗುರುತರ ಗೃಹಸ್ಥ ಜವಾಬ್ದಾರಿಯ ನಿರ್ವಹಣೆಗೆ ಗೃಹಿಣಿಯ ಸಹಾಯ ಬೇಕೇ ಬೇಕು. ವಿಧುರನು, ಯಜ್ಞಯಾಗ, ಅಗ್ನಿ ಹೋತ್ರಾದಿಗಳನ್ನು ನಿರ್ವಹಿಸಲಾರ ದಾನ-ಧರ್ಮ ಗಳನ್ನು ಸ್ವೀಕರಿಸಲಾರ, ಹೀಗಾಗಿ ಮರುಮದುವೆಯ ಅವಸರವಂತೆ !

ನಿಯೋಗ ಪದ್ಧತಿ ಮತ್ತು ವಿಧವಾ ವಿವಾಹಗಳು ಉಲ್ಲೇಖಿತವಾಗಿದ್ದರೂ ಅವುಗಳ ವಿವರಣೆಯಿಲ್ಲ. ಅದ ರಂತೆ ಸ್ವಯಂ ವರದ ಪ್ರಸ್ತಾಪ ವಿದ್ದರೂ ಬಾಲವಿವಾಹ ಗಳೇ ಹೆಚ್ಚು ಪ್ರಚಲಿತವಿದ್ದಾಗ ಅನುಕೂಲ ವಂತರಲ್ಲಿ ಪ್ರತಿಷ್ಠಿತ, ರಾಜಮನೆತನಗಳ ಮಟ್ಟಿಗೆ ಅವು ಆಗೀಗ ಕಂಡು ಬರುತ್ತಿದ್ದವು. ಮೋಜಿನ ವಿಚಾರವೆಂದರೆ ನಿಯೋಗವು 'ಕಲಿವರ್ಜಿತ' ಎಂದು ಒಂದೆಡೆ ಹೇಳಿದರೆ, ಸಂಪತ್ತಿನ ವಿಭಜನೆ (ದಾಯಭಾಗ) ಯ ಪ್ರಕರಣದಲ್ಲಿ ಪುತ್ರರಹಿತರು ಮಕ್ಕಳನ್ನು ಪಡೆಯುತ್ತಿರ ಬಹುದಾದ ಕೆಲಕ್ರಮಗಳನ್ನು ಉಲ್ಲೇಖಿಸಲಾಗಿದೆ. ಧರ್ಮಪತ್ನಿಯಲ್ಲಿ ಹುಟ್ಟಿದ ಔರಸ ಪುತ್ರನಲ್ಲದೇ, ಪರಸ್ತ್ರೀಯಲ್ಲಿ ಹುಟ್ಟಿದ ಕ್ಷೇತ್ರಜ, ಗೌಪ್ಯವಾಗಿ ಹುಟ್ಟಿದ ಗೂಢಜ, (ಯಾವ ಜಾತಿಯ ಪುರುಷನಿಂದ ಹುಟ್ಟಿದವನೆಂಬುದು ರಹಸ್ಯ ವಾಗಿದ್ದರೆ), ಕನ್ಯೆಯಲ್ಲಿ ಹುಟ್ಟಿದ ಕಾನೀನ, ಪುನರ್ವಿವಾ ಹಿತೆ ವಿಧವೆಯಲ್ಲಿ ಹುಟ್ಟಿದ 'ಪೌನರ್ಭವ', ಕ್ರೀತ (ದುಡ್ಡಿಗೆ ಕೊಂಡ), ದತ್ತಕ ಮತ್ತು ಗರ್ಭಿಣಿಯಲ್ಲಿ ವಿವಾಹದ ನಂತರ ಹುಟ್ಟಿದ ಸಹೋಢಜ ಬೇರೆ ಜಾತಿಯ ಸ್ತ್ರಿಯರಲ್ಲಿ ಪಡೆದವು ಹೀಗೆ ಹನ್ನೆರಡು ವಿಧದ ಪುತ್ರರ ಉಲ್ಲೇಖ ಬರುತ್ತದೆ. ಆಸ್ತಿಯ ರಕ್ಷಣೆ ಬಹುಮುಖ್ಯ ವಾದಾಗ, ಗಂಡು ಮಗುವಿನ ಜಾತಿಮುಖ್ಯವಲ್ಲ, ಪುನರ್ಭೂ ಅಥವಾ ಮರುಮದುವೆಯಾದ ವಿಧವೆಯ ಮಕ್ಕಳು ಆಸ್ತಿಯಗ್ರಹಣಕ್ಕೆ. ಪಿಂಡದಾನಕ್ಕೆ ಅರ್ಹ ರಾಗುತ್ತಿದ್ದರು. ಸಾಮಾನ್ಯವಾಗಿ ನಡೆಯುವ ಮದುವೆ ಗಳಲ್ಲಿ ಕಠಿಣ ಕಟ್ಟುಪಾಡುಗಳನ್ನು ಪಾಲಿಸುವ ಜನಾಂಗ, ಆಸ್ತಿಯ ಪ್ರಶ್ನೆ ಬಂದಾಗ, ಗಂಡು ಸಂತತಿಯ ಬಗ್ಗೆ ತೋರುವ ಔದಾರ್ಯ ಅಚ್ಚರಿಪಡಿಸುವಂತಹದು.

**ಸ್ತ್ರೀಧನ :** ಬಹು ಚರ್ಚಿತವಾದ ಈ ವಿಷಯ ಶತಕದಿಂದ ಶತಕಕ್ಕೆ ವಿವಿಧ ರೂಪ ತಾಳಿ ಈಗಲೂ ಚರ್ಚಾಸ್ಪದವಾಗಿಯೇ ಮುಂದುವರದಿದೆ. ಕ್ರಿಸ್ತಶಕದ ಮೊದಲ ಶತಕಗಳಲ್ಲಿ ಮಹಿಳೆಯರು ಮದುವೆಗೆ ಮೊದಲು ಮತ್ತು ನಂತರ ಹೊಂದಿರುತ್ತಿದ್ದ ಚರಾಚರ ಆಸ್ತಿಯೆ ಲ್ಲವೂ ಸ್ತ್ರೀಧನದಲ್ಲಿ ಸೇರ್ಪಡೆಯಾಗಿತ್ತು. ಮಗಳಾಗಿ, ಮಡದಿಯಾಗಿ, ತಾಯಿಯಾಗಿ, ಅಕಸ್ಮಾತ್ ಮೊದಲೇ ವಿಧವೆಯಾದರೂ ಅವಳ ಆಸ್ತಿಯ ಹಕ್ಕಿಗೆ ಚ್ಯುತಿ ಬಾರ ದಂತೆ, ಆರ್ಥಿಕ ನಿರ್ಭರತೆಗೆ ತೊಂದರೆಯಾಗದಂತೆ ವ್ಯವಸ್ಥೆಯಿತ್ತು. ಮಹಾ ಮಹೋಪಾಧ್ಯಾಯ ರಾಣೆ ಯವರ ಅಭಿಪ್ರಾಯದಲ್ಲಿ ಶತಕಗಳಲ್ಲಿ ಸ್ತ್ರೀಯರ ಪಾಲಿನ ಆಸ್ತಿ (ಎರಡೂ ಕಡೆಯದು ಸೇರಿ) ಬೆಳೆಯುತ್ತ ಹೋಗಿ, ಅವಿಭಕ್ತ ಕುಟುಂಬದಲ್ಲಿ ಅದಕ್ಕೆ ಕಡಿವಾಣ ಹಾಕಬೇಕಾದ ಕಾಲವೊದಗಿ ಸ್ತ್ರೀಧನದ ಮೂಲ ಕಲ್ಪನೆ ಬದಲಾಗಿರ ಬೇಕು. ಕೊನೆಗೊಮ್ಮೆ ಅವಳ ಪಾಲನ್ನು ಸ್ಥಿರ ಆಸ್ತಿ ಯಲ್ಲಿ ಕನಿಷ್ಟವಾಗಿಸಿ 'ಚರ'ಕ್ಕೆ ಸೀಮಿತ ಮಾಡಲಾ ಯಿತು. ಅರ್ಥಾತ್ ಮದುವೆಯ ಕಾಲದಲ್ಲಿ ಕೊಡಲಾಗು ತ್ತಿದ್ದ ಒಡವೆ, ಬಟ್ಟೆಬರೆ, ಪಾತ್ರೆಗಳು, ಗೋವುಗಳು ಇತ್ಯಾದಿಗಳನ್ನು ಮಾತ್ರ ಸೇರಿಸಲಾಯಿತು.

ಸ್ತ್ರೀಧನದಲ್ಲಿ 'ಪ್ರಾಪ್ತ', 'ಲಬ್ಧ' ಮತ್ತು 'ದತ್ತ' ಭಾಗಗಳಿದ್ದವು, ಗಂಡುಮಕ್ಕಳಂತೆ ತಂತಾನೆ ಪಿತ್ರಾರ್ಜಿತ ಪಾಲು' ಲಬ್ಧವಾದರೆ, ವಿವಾಹ ಕಾಲದ ಅಲಂಕಾರಾದಿಗಳು 'ಪ್ರಾಪ್ತ' ಮತ್ತು ಕಾಣಿಕೆಯ ರೂಪ ದಲ್ಲಿ ಹಿರಿಯರು, ಬಂಧುಗಳು ಕೂಡಮಾಡುತ್ತಿದ್ದುದು 'ದತ್ತ' ವೆಂದು ಸ್ಥೂಲಭಾಗ ಮಾಡಬಹುದು. ವರ ದಕ್ಷಿಣೆಯ ಉಲ್ಲೇಖ ಇಲ್ಲ ! ಕನ್ಯಾಶುಲ್ಕವಿತ್ತು. ವರ ನಾದವನು ಕನ್ಯಾ ಪಿತೃವಿಗೆ ಗೋವುಗಳ ರೂಪದಲ್ಲಿ ಅಥವಾ ತತ್ಸಮವಾದ ಇನ್ನೊಂದು ಉಡುಗೊರೆಯನ್ನು 'ಗುಡ್‌ವಿಲ್' ರೂಪದಲ್ಲಿ ಸಲ್ಲಿಸಬೇಕಾಗುತ್ತಿತ್ತು ಅದು ಕೂಡ ಮದುವೆಯ ನಂತರ ಮಗಳಿಗೇ ಸಲ್ಲುತ್ತಿತ್ತು. ಮನು-ಯಾಜ್ಞವಲ್ಕ್ಯ ಸ್ಮೃತಿಗಳ ಉಲ್ಲೇಖನೋಡಿದರೆ ಸ್ತ್ರೀಧನದ ಮೊತ್ತ ಸಾಕಷ್ಟು ಇರುತ್ತಿತ್ತು. ಸ್ತ್ರೀಧನ ಎತ್ತಿ ಹಾಕಿದವರನ್ನು ಪತ್ತೆ ಹಚ್ಚಿ ಅರಸನಾದವನು

ಶಿಕ್ಷಿಸಬೇಕು ಎಂದು ಮನು, ಮಿತಾಕ್ಷರಾಗಳು ಸ್ಪಷ್ಟ ಪಡಿಸಿದೆ. ಸ್ತ್ರೀಧನದ ಬಡ್ಡಿ (ವೃದ್ಧಿ)ಯ ಉಲ್ಲೇಖ ವಿರುವದರಿಂದ ಒಡವೆ, ವಸ್ತ್ರಗಳ ಜೊತೆಗೆ ಹಣವೂ ಇರುತ್ತಿತ್ತು ಎಂಬುದು ಸ್ಪಷ್ಟ, ಹಣ ಎತ್ತಿ ಹಾಕಿದವರು, ಬಡ್ಡಿಯ ಜೊತೆಗೆ ದಂಡವನ್ನೂ ಕೊಡಬೇಕಾಗುತ್ತಿತ್ತು.

ತಂದೆಯು ತನ್ನ ಆಸ್ತಿಯನ್ನು ಸ್ವಂತ ಇಚ್ಛೆಯಿಂದ ಸಮಾನ ವಿಭಾಗಮಾಡಿ ಪುತ್ರರಿಗೆ ಕೊಡ ಮಾಡಿದಾಗ, ಪತ್ನಿಗೂ ಅಷ್ಟೇ ಪಾಲನ್ನು ಕೊಡಬೇಕು, ಎಂಬ ಯಾಜ್ಞವಲ್ಕ್ಯನ ನಿರ್ದೇಶವನ್ನು ಮಿತಾಕ್ಷರಾ ಎತ್ತಿ ಹಿಡಿದಿದೆ. ಸ್ಮೃತಿಕಾರನಿಗೂ ಟೀಕಾಕಾರನಿಗೂ 8–10 ಶತಕಗಳ ಅಂತರವಿದ್ದುದನ್ನು ಗಮನಿಸಿದಾಗ ಸ್ತ್ರೀಧನದ ಮಟ್ಟಿಗೆ ತನ್ನ ಯುಗಧರ್ಮಕ್ಕೆ ಮೀರಿಯೇ ವಿಜ್ಞಾನೇಶ್ವರ, ಉದಾರ ಮನೋಭಾವ ತಳೆದಿದ್ದಾನೆ, ಎಂದು ಹೇಳಬೇಕಾಗುತ್ತದೆ.

ಪತಿಯು ಸ್ವೇಚ್ಛೆಯಿಂದ ಪುತ್ರರಿಗೆ ಸಮಾನ ಭಾಗವನ್ನು ಕೊಟ್ಟಾಗ ಪತ್ನಿಗೂ ಅಷ್ಟೇಪಾಲು ಸಂದಾಯವಾಗ ಬೇಕಿತ್ತು. ಆದರೆ ಆದಾಗಲೇ ಅವಳು ಸ್ತ್ರೀಧನ ಹೊಂದಿದ್ದರೆ, ಅರ್ಧಾಂಶ ಸಿಗುತ್ತಿತ್ತು. ಸ್ತ್ರೀಧನ ನೇರವಾಗಿ ಆಕೆಯ ಹೆಣ್ಣು ಮಕ್ಕಳಿಗೇ ಹೋಗುತ್ತಿತ್ತು. ಕನ್ಯೆಯರು ಇಲ್ಲದಿದ್ದರೆ ಮಾತ್ರ ಗಂಡು ಮಕ್ಕಳಿಗೆ ಹೋಗುತ್ತಿತ್ತು. ಗಂಡನಿಗೆ ಕೂಡ ಸ್ತ್ರೀಧನದ ಮೇಲೆ ಅಧಿಕಾರ ವಿರಲಿಲ್ಲ. ಬರಗಾಲ, ಕಾಯಿಲೆ, ಯಂಥ ಸಂಕಟ ಪ್ರಸಂಗಗಳಲ್ಲಿ ಮತ್ತು ಧರ್ಮಕಾರ್ಯದಲ್ಲಿ ಮಾತ್ರ ಸ್ತ್ರೀಧನವನ್ನು ಪತಿಯಾದಾತ ಬಳಸಿಕೊಳ್ಳ ಬಹುದಾಗಿತ್ತು.

'ಲೌಕಿಕಂ ಏವ ಸತ್ವಂ' ಸೊತ್ತು ಎಂಬುದು ಕೇವಲ ಲೌಕಿಕವಾದದ್ದು. ಅದಕ್ಕೆ ಧಾರ್ಮಿಕ ಹಿನ್ನೆಲೆ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿ, ಸ್ವಂತ ಸಂಪಾದನೆಯ ವಿತರಣೆಯಲ್ಲಿ ವ್ಯಕ್ತಿಯು ಸ್ವತಂತ್ರ, ಅದು ದಾಯಾದಿಗಳಿಗೆ ಹೋಗುವದಿಲ್ಲ, ಎಂದು ಮಿತಾಕ್ಷರಾ ಹೇಳಿ ಮಹಿಳೆಯರ ಪಾಲಿಗೆ ಆತಂಕ ಒಡ್ಡಿಲ್ಲ, ಯುರೋಪಿನಲ್ಲಿ Married Womens' Property Act ಬಳಕೆಯಲ್ಲಿ ಬಂದಿದ್ದು ಕ್ರಿ.ಶ. 1886ರಲ್ಲಿ. ಕೋಡ ನೆಪೋಲಿಯನ್, ಮಹಿಳೆಯರ ಆಸ್ತಿಯ ಮೂಲಭೂತ ಹಕ್ಕನ್ನು ಗುರುತಿಸುವ ಪ್ರಥಮ ಪ್ರಯತ್ನವಾಗಿದೆ. ಆತನಕ ಪಾಶ್ಚಾತ್ಯ ಹೆಂಗಳೆಯರಿಗೆ ಕಾಯದೆ ಪ್ರಕಾರ ಯಾವ ಆಸ್ತಿ ಅಥವಾ ಹಣಕ್ಕೆ ಹಕ್ಕು ಇರಲಿಲ್ಲ, ಎಂಬುದನ್ನು ನೆನಸಿಕೊಂಡಾಗ, ನಮ್ಮ ಸ್ಮೃತಿಕಾರರು ಸಹಸ್ರಾರು ವರ್ಷಮೊದಲೇ ಅದನ್ನು ಗುರುತಿಸಿದ್ದರು, ಮತ್ತು ತಲತಲಾಂತರವಾಗಿ ಹೆಣ್ಣಿನಿಂದ ಹೆಣ್ಣಿಗೆ ಆಸ್ತಿ ಸೇರುವ ವ್ಯವಸ್ಥೆ ಮಾಡಿದ್ದರು ಎಂಬುದನ್ನು ಗಮನಿಸಬೇಕು. ಪುರುಷ ಪ್ರಧಾನ ಸಮಾಜದಲ್ಲಿ, ಹೆಣ್ಣಿಗೆ ಸ್ವಲ್ಪವಾದರೂ ಆರ್ಥಿಕ ಭದ್ರತೆ ನೀಡಲು ಸಹಾಯ ಮಾಡಿದರು. ಶತಕದಿಂದ ಶತಕಕ್ಕೆ ವಸ್ತು ಸ್ಥಿತಿ ಬದಲಾಗಿ, ಸ್ಮೃತಿಗಳ ವ್ಯಾಖ್ಯಾನ. ವಿಶ್ಲೇಷಣೆಗಳೂ ಬದಲಾಗಿ, ಅಸಹಾಯಕ ಹೆಂಗಳೆಯರಿಗೆ ಅನ್ಯಾಯವಾಗಿದ್ದರೆ, ಅದು ಮೂಲ ಸ್ಮೃತಿಕಾರರ ತಪ್ಪಲ್ಲ.

ಹಿಂದಿನ ಯಾವದೇ ಸ್ಮೃತಿಕಾರರಿಗಿಂತ ಸ್ತ್ರೀಧನದ ವಿಚಾರದಲ್ಲಿ ವಿಜ್ಞಾನೇಶ್ವರ, ಉದಾರ ನಿಲುವನ್ನು ತಳೆದಿದ್ದನಾದರೂ ಅದರ ಮೊತ್ತ ಕಡಿಮೆಯಾಗುತ್ತಬಂದಿತು. ಒಂದು ದೃಷ್ಟಿಯಿಂದ ಇದು ಒಳ್ಳೆಯದೇ ! ಜೀಮೂತ ವಾಹನನ (12ನೇ ಶತಕ) 'ದಾಯಭಾಗ' ಪದ್ಧತಿ ಪ್ರಚಲಿತವಿದ್ದ ಬಂಗಾಲದಲ್ಲಿ ಅವಿಭಕ್ತ ಕುಟುಂಬದ ವಿಧವೆಗೆ, ನಿಧನ ಹೊಂದಿದ ಪತಿಯ ಆಸ್ತಿ-ಪಾಲಿನ ಹಕ್ಕನ್ನು ಕೊಡಮಾಡಲಾಗಿತ್ತು. ಈ ಔದಾರ್ಯವೇ ಆಕೆಯ ಪಾಲಿಗೆ ಉರುಳು ಅಲ್ಲ, ದಹಿಸುವ ಅಗ್ನಿಯಾಗಿ ಪರಿಣಮಿಸಿತು. ಸತಿ ಹೋಗಲು ಒತ್ತಾಯ ನಾಲ್ಕೂ ಕಡೆಯಿಂದ ಬರಲಾರಂಭಿಸಿತು. ಅಲ್ಲಿ ಕಂಡುಬಂದಷ್ಟು ಸಹಗಮನ ಪ್ರಕರಣಗಳು ಬ್ರಿಟಿಶರ ಕಾಲಕ್ಕೆ ಭಾರತದ ಬೇರೆ ಪ್ರದೇಶಗಳಲ್ಲಿ ಇರಲಿಲ್ಲ. ಆಸ್ತಿ ಮತ್ತು ಬಂಗಾರ ಇದಕ್ಕೆ ಕಾರಣವೆಂದು ಬೇರೆ ಹೇಳ ಬೇಕೇ ? ಬಲವಂತವಾಗಿ ಸ್ತ್ರೀಯರನ್ನು ಬೆಂಕಿಗೆನೂಕಿದ ಉದಾಹರಣೆಗಳು ಬೇಕಾದಷ್ಟು ಇದ್ದವು. ರಾಜಾರಾಮ ಮೋಹನರಾಯ್‌ರು ಸಹಗಮನ ನಿಷೇಧವನ್ನು ಜಾರಿಗೆ ತರುವಂತೆಯತ್ನಿಸಲಿಕ್ಕೆ ಅವರ ಕೌಟುಂಬಿಕ ಘಟನೆಕಾರಣವಾಗಿತ್ತು ಎಂಬುದನ್ನು ಚರಿತ್ರೆ ಹೇಳುತ್ತದೆ. ಕಾಲಾಂತರದಲ್ಲಿ ಕನ್ನಡ ಮಹಿಳೆಗೆ ದೊರೆಯುತ್ತಿದ್ದ ಸ್ತ್ರೀಧನ ಕಡಿಮೆಯಾಗುತ್ತ ಹೋದರೂ ಅದು ಅವಳ ಜೀವ ಉಳಿಸಲೂ ಸಹಾಯ ಮಾಡಿತ್ತು ಎಂಬ ವಿಷಾದದ ಸತ್ಯವನ್ನು ಒಪ್ಪಿಕೊಳ್ಳ ಬೇಕಾಗಿದೆ !

ಆಧುನಿಕ ದೃಷ್ಟಿಕೋನದಿಂದ ಅಂದಿನ ಸ್ತ್ರೀಯರ ಸ್ಥಾನಮಾನ ಹೀನವಾಗಿತ್ತೆಂದು ಕಂಡರೂ ಅವರು ಸಮಾಜದಲ್ಲಿ ಗೌರವಾನ್ವಿತವಾಗಿಯೇ ಕಾಣಲ್ಪಡಬೇಕು, ಎಂಬುದನ್ನು ಸ್ಮೃತಿಕಾರರು ಮತ್ತೆ ಮತ್ತೆ ನೆನಪಿಸುತ್ತಾರೆ. ಯಾಜ್ಞವಲ್ಕ್ಯನು ಮನುವನ್ನು ಅನುಸರಿಸಿ ಹೇಳಿದ ಕೆಲವು ಅಂಶಗಳು ಇಂತಿವೆ.

1) ರಸ್ತೆಯಲ್ಲಿ ವೃದ್ಧರು, ಭಾರ ಹೊರುವವರು, ಸ್ನಾತಕರು, ರೋಗಿ, ರಾಜ, ವಾಹನಗಳಂತೆ ಹೆಂಗಸರಿಗೆ ದಾರಿ ಬಿಟ್ಟು ಕೊಡಬೇಕು. ಲೇಡೀಸ್ ಫಸ್ಟ್ !

2) ವಿವಾಹ ಯೋಗ್ಯ ಕನ್ಯೆಯ ಕುರಿತು ದೋಷಾರೋಪ ಮಾಡಿದರೆ, ಸುಳ್ಳುಸುದ್ದಿ ಹರಡಿದರೆ ಶಿಕ್ಷೆಯಾಗುತ್ತಿತ್ತು.

3) ಹೆಣ್ಣು ಮಕ್ಕಳಿಗೆ ಗಲ್ಲುಶಿಕ್ಷೆ (**Capital Punishment**) ಇರಲಿಲ್ಲ.

4) ಯಾವ ವರ್ಣದ ಹೆಂಗಸೂ ಟ್ಯಾಕ್ಸ್ (ಕರ) ಕಟ್ಟಬೇಕಾಗಿರಲಿಲ್ಲ.

5) ನ್ಯಾಯ ನಿರ್ಣಯದಲ್ಲಿ ದಿವ್ಯ ಪರೀಕ್ಷೆಗಳು ಸಾಮಾನ್ಯವಾಗಿದ್ದ ಯುಗದಲ್ಲಿ ಸ್ತ್ರೀಗೆ ಕ್ರೂರವಾದ ದಿವ್ಯವನ್ನು ಕೊಡುತ್ತಿರಲಿಲ್ಲ.

6) ಮಹಾಪಾತಕಗಳನ್ನು ಮಾಡಿ ಪತಿತರಾದವರ ಮಗನು ಪತಿತನೆನಿಸಿಕೊಂಡರೂ ಮಗಳು ಪತಿತಳಲ್ಲ. ಮಗಳಿಗೆಯಾವತ್ತು ಸಲ್ಲಬೇಕಾದ ಒಡವೆ ವಸ್ತುಗಳನ್ನು ಕೊಡಮಾಡಿ ಸವರ್ಣೀಯನಿಗೆ ಕೊಟ್ಟು ಮದುವೆಮಾಡಬೇಕು ಎಂದು ನಿರ್ದೇಶಿಸಲಾಗಿದೆ.

ಪತಿಯು ದೇಶಾಂತರಕ್ಕೆ ಹೋದಾಗ ಪತ್ನಿಯು ಸಂಯಮ ಪಾಲಿಸಬೇಕಿತ್ತು. ಉತ್ಸವ-ಜಾತ್ರೆ ಆಟ ಪಾಟಗಳಲ್ಲಿ, ಮದುವೆ, ವಿನೋದಾದಿ ಸಮಾರಂಭಗಳಲ್ಲಿ ಭಾಗವಹಿಸ ಬಾರದಾಗಿತ್ತು. ಅರ್ಥಾತ್ ಪತಿಯು ಊರಲ್ಲಿದ್ದರೆ ಈ ಸಾಮಾಜಿಕ ಜೀವನ ಅವಳಿಗೆ ಲಭಿಸುತ್ತಿತ್ತು.

ಸಮಕಾಲೀನ ಇತರ ಚಾರಿತ್ರಿಕ ಆಧಾರಗಳನ್ನು (ಶಾಸನಗಳು, ಕಾವ್ಯಗಳು, ವಿದೇಶೀಯರ ಪ್ರವಾಸಕಥನಗಳು) ಗಮನಿಸಿದರೆ ಇವೆಲ್ಲ ಕಟ್ಟುಪಾಡುಗಳು ಪಾಲಿಸಲ್ಪಡುತ್ತಿರಲಿಲ್ಲವೆಂಬುದು ಸ್ಪಷ್ಟ ! ವಿಜಯ ಯಾತ್ರೆ, ಬೇಟೆ, ಸಮಾರಂಭಗಳಲ್ಲಿ ಹೆಣ್ಣುಮಕ್ಕಳು ಸಾಕಷ್ಟು ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದರು.ಹೊಯ್ಸಳ,ಚಾಲುಕ್ಯ ರಾಣಿಯರು ವಿವಿಧ ಕಲೆಗಳಲ್ಲಿ ಕುಶಲೆಯರಿರುವಂತೆ ಆಡಳಿತದಲ್ಲೂ ಮುಂದಾಗಿದ್ದರು. ಗ್ರಾಮ, ಊರು, ನಗರ, ನಾಡುಗಳನ್ನು ಸಮರ್ಥವಾಗಿ ಆಳಿದವರ ಹೆಸರುಗಳು ದೊರೆಯುತ್ತವೆ. ದಾನ ಧರ್ಮಗಳನ್ನು ಸ್ವತಂತ್ರವಾಗಿ ನಿರ್ವಹಿಸುತ್ತಿದ್ದರು. ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುತ್ತಿದ್ದರು, ಧಾರ್ಮಿಕಸಂಸ್ಥೆಗಳ ಮುಖ್ಯಸ್ಥರಾಗಿದ್ದರು. ಸ್ವತಃ ವಿಜ್ಞಾನೇಶ್ವರನ ಆಶ್ರಯದಾತ ಚಾಲುಕ್ಯ ವಿಕ್ರಮಾದಿತ್ಯನಿಗೆ ಹತ್ತಾರು ಹೆಂಡಂದಿರು. ಅವರು ಆಡಳಿತಗಾರರಾಗಿ ಕಾರ್ಯನಿರ್ವಹಣೆ ನಡೆಸುತ್ತಿದ್ದ ಊರು-ನೆಲೆವೀಡುಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ.

ಮಿತಾಕ್ಷರಾದಂಥ ಸ್ಮೃತಿಗ್ರಂಥಗಳು ಸಮಾಜದ ಎಲ್ಲ ವರ್ಗಗಳ ಹಿತಚಿಂತನೆಯನ್ನು ಗಮನದಲ್ಲಿಡುತ್ತಿದ್ದವು. ಉಪಪತ್ನಿಯರು, ವೇಶ್ಯೆಯರ ಶೋಷಣೆಯಾಗದಂತೆ ನಿಯಮಗಳನ್ನು ರಚಿಸಲಾಗಿದೆ. ಈ ಕಾಲಕ್ಕೆ ದೇವಸ್ಥಾನಗಳನ್ನು ಕಟ್ಟಿಸಿ ಪಾತ್ರದ ಹೆಂಗಳೆಯರನ್ನು, ಸೂಳೆಯರನ್ನು ದೇವರ ಸೇವೆಗೆ ಬಿಡುವದು ಸಾಮಾನ್ಯವಾಗಿತ್ತು. ಆದರೆ ಮಿತಾಕ್ಷರಾ ಅದನ್ನು ಉಲ್ಲೇಖಿಸುವದಿಲ್ಲ, ದಾಸಿಯರನ್ನು, ಉಲ್ಲೇಖಿಸುತ್ತದೆಯೇ ಹೊರತು ದೇವದಾಸಿಯರನ್ನಲ್ಲ, ಆದ್ದರಿಂದ ದೇವದಾಸಿಪದ್ಧತಿ ಸ್ಮೃತಿ ವಿರೋಧವಾದದ್ದು ಎಂದು ಪರಿಗಣಿಸಬಹುದು.

"ಆದರ್ಶ ಗೃಹಿಣೀ ಧರ್ಮವೆಂಬುದು ಹೀಗೆ ಇರುತ್ತದೆ. ಅದನ್ನು ಪಾಲಿಸಲುಯತ್ನಿಸಿರಿ'' ಎಂಬುದನ್ನು ಸ್ಮೃತಿಕಾರರು ಮತ್ತು ವ್ಯಾಖ್ಯಾನಕಾರರು ಪುನಃ ಪುನಃ ಜ್ಞಾಪಿಸಲು ಯತ್ನಿಸಿದರೂ, "ಶಾಸ್ತ್ರಾದ್ ರೂಢಿ ರ್ಬಲೀಯಸೀ'' (ಶಾಸ್ತ್ರಕ್ಕಿಂತ ರೂಢಿ ಬಲವಾದದ್ದು) ಎಂಬುದನ್ನು ಅವರೂ ನಂಬಿದ್ದರು. ಜನತೆಯೂ ನಂಬಿತ್ತು.

ಒಳ್ಳೆಯ ಶಾಸ್ತ್ರ ಪಂಡಿತರು, ಶಾಸ್ತ್ರವನ್ನು (ಸ್ಮೃತಿ ಸಂಹಿತೆಯನ್ನು) ಅನುಕೂಲ ಸಿಂಧುವಾಗಿಸಲು ಸಹಾಯ ಮಾಡುತ್ತಿದ್ದರು. ಪ್ರಾಯಶ್ಚಿತ್ತಾದಿಗಳನ್ನು ವಿಧಿಸಿ

ತಪ್ಪಿತಸ್ಥರನ್ನು ಸನ್ಮಾರ್ಗಕ್ಕೆ ತರುವ ಪ್ರಯತ್ನ ಮಾಡು ತ್ತಿದ್ದರು. ಕೆಲವು ಅಜ್ಞಾನಿಗಳು ಮುಗ್ಧರದಾರಿ ತಪ್ಪಿ ಸುತ್ತಿದ್ದರು. ರಾಜಕೀಯಗೊಂದಲಗಳು ಸಾಮಾಜಿಕ ಅರಕ್ಷಿತತೆಗೆದಾರಿ ಮಾಡಿ ಕೊಡುತ್ತಿದ್ದವು. ಹೊರಗಿನ ರಕ್ಷಣೆ ದುರ್ಲಭವಾದಾಗ ಇದ್ದುದನ್ನೇ ಹೇಗಾದರೂ ಕಾಪಾಡಿಕೊಂಡು ಹೋಗುವದು ಮಾನವ ಸಹಜ ಪ್ರವೃತ್ತಿ. ಸುರಕ್ಷಿತತೆಯ ಅಭಾವದಲ್ಲಿ ಸ್ತ್ರೀಯರ ಪರಿಸ್ಥಿತಿ ಅಸಹನೀಯವಾಗುವದರಿಂದ ಅವರ ಮೇಲಿನ ಕಟ್ಟುಪಾಡುಗಳು ಬಿಗಿಯಾಗುತ್ತ ಹೋದವು. ಸ್ತ್ರೀಯರ ನಿಕೃಷ್ಟಸ್ಥಾನ, ಮಧ್ಯಯುಗದ ಭಾರತಕ್ಕಷ್ಟೇ ಸೀಮಿತವಾಗಿರದೇ ವಿಶ್ವದ ಸಮಕಾಲೀನ ಇತರ ಸಮಾಜಗಳಲ್ಲೂ ಕಂಡುಬರುತ್ತಿತ್ತು. ದಮನದ ಪ್ರಕಾರಗಳು ಮಾತ್ರ ಬೇರೆ ಆಗಿದ್ದವು.

ಶಿಕ್ಷಣ, ಸಾಕ್ಷರತಾ ಪ್ರಸಾರ, ಕಾಗದ-ಮುದ್ರಣಗಳ ಸೌಲಭ್ಯ, ಸಮೂಹ ಮಾಧ್ಯಮಗಳ ಸಂಪರ್ಕಜಾಲಗಳ ಮೂಲಕ ಸಾರ್ವಜನಿಕರ ಅರಿವು ಬೆಳೆಸುವ ಎಲ್ಲ ಅನುಕೂಲಗಳು ಇರುವ ಇಂದಿನ ದಿನಗಳಲ್ಲೂ ಬಾಲ ಕಾರ್ಮಿಕರು, ಬಾಲವಿವಾಹ, ದೇವದಾಸಿ ಪದ್ಧತಿ, ಹೆಣ್ಣುಮಕ್ಕಳ ಮಾರಾಟ ಮುಂತಾದ ದುಷ್ಟಪದ್ಧತಿಗಳಿಂದ ನಮ್ಮ ಸಮಾಜ ಮುಕ್ತವಾಗಿಲ್ಲ. ಇವುಯಾವುವನ್ನೂ ವ್ಯಾಖ್ಯಾನಕಾರ ವಿಜ್ಞಾನೇಶ್ವರ ಉಲ್ಲೇಖಿಸಿಲ್ಲ, ಪ್ರೋತ್ಸಾಹಿಸಿಲ್ಲ, ಮಿತಾಕ್ಷರಾದಲ್ಲಿ ಕಂಡ ಸಮಾಜಕ್ಕಿಂತ ನಾವಿಂದು ಬದುಕುತ್ತಿರುವ ಸಮಾಜ, ಎಷ್ಟರಮಟ್ಟಿಗೆ, ಯಾವ ವಿಧದಲ್ಲಿ ಭಿನ್ನವಾಗಿದೆ ? ಎಂದು ನಮಗೆ ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ.



---

## ನೀರ್ಜಾ ಭನೋಟ್ ಪ್ರಶಸ್ತಿಗಳು

ಅಶೋಕ ಚಕ್ರದಿಂದ ಗೌರವಿಸಲ್ಪಟ್ಟ ಏಕಮಾತ್ರ ಮಹಿಳೆ ನೀರ್ಜಾ ಭನೋಟ್ ಅವರ ನೆನಪಿನಲ್ಲಿ ಪ್ರತಿ ವರ್ಷ ಇಬ್ಬರು ದಿಟ್ಟ ಮಹಿಳೆಯರಿಗೆ 'ನೀರ್ಜಾ ಭನೋಟ್ ಪ್ರಶಸ್ತಿ'ಯನ್ನು ನೀಡಲಾಗುತ್ತದೆ. ಒಂದು ಪ್ರಶಸ್ತಿ, ಸಮಾಜದ ಅನ್ಯಾಯವನ್ನು ಎದುರಿಸಿ, ಅದರ ವಿರುದ್ಧ ತನ್ನ ಬದುಕಿನಲ್ಲಿ ಧೈರ್ಯ ಸಾಹಸವನ್ನು ಪ್ರದರ್ಶಿಸಿ ಇತರರಿಗೂ ಮಾದರಿಯಾದ ಮಹಿಳೆಗೆ ನೀಡಲಾಗುತ್ತದೆ. ಜಗತ್ತಿನ ಯಾವುದೇ ಏರಲೈನ್‌ನ ವಿಮಾನದಲ್ಲಿ ಕೆಲಸ ಮಾಡುತ್ತಿದ್ದು ಇತರರ ನೆರವಿಗೆ ತನ್ನ ಕರ್ತವ್ಯದಾಚೆಗೂ ಕೈ ಚಾಚಿ ದಿಟ್ಟತನ ತೋರಿದ ಮಹಿಳೆಗೆ ಮತ್ತೊಂದು ಪ್ರಶಸ್ತಿ ನೀಡಲಾಗುತ್ತದೆ. ಕಳೆದ ನಾಲ್ಕು ವರ್ಷಗಳಲ್ಲಿ, ಒಟ್ಟು ಏಳು ಜನ ಮಹಿಳೆಯರು ಈ ಪ್ರಶಸ್ತಿಯನ್ನು ಪಡೆದಿದ್ದಾರೆ.

**1991 : ಫ್ಲೇವಿಯಾ ಆಗ್ನೆಸ್ :** ಎಳೆ ವಯಸ್ಸಿಗೇ ವಿವಾಹವಾಗಿ, ಮೂರು ಮಕ್ಕಳನ್ನು ಪಡೆದು, ಹಿಂಸೆಯ ಕೌಟುಂಬಿಕ ಜೀವನದಲ್ಲಿ ಸಿಕ್ಕಿಕೊಂಡ ಫ್ಲೇವಿಯಾ, ತನ್ನ 33ನೇ ವರ್ಷದಲ್ಲಿ ಗಂಡನ ಮನೆಯನ್ನು ಬಿಡಬೇಕಾಗಿ ಬಂತು. ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸಿ, 'ಲಾ' ಓದಿ ಇಂದು ಯಶಸ್ವೀ ನ್ಯಾಯವಾದಿಯಾಗಿರುವ ಫ್ಲೇವಿಯಾ, ಸ್ತ್ರೀಪರ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಮಹಿಳೆ.

**1991 : ಅಮೃತಾ ಅಹ್ಲುವಾಲಿಯಾ :** ಹನ್ನೊಂದು ವರ್ಷದ ಬಾಲಕಿ ಅಮೀನಾಳನ್ನು 'ಮದುವೆ'ಯ ಹೆಸರಿನಲ್ಲಿ ಹೊತ್ತೊಯ್ಯುತ್ತಿದ್ದ ಅರವತ್ತು ವರ್ಷದ ಅರಬ್ ಶೇಖ್ ಅಲ್-ಸಗಹನ್‌ನಿಂದ ಬಿಡಿಸಿದ ಇಂಡಿಯನ್ ಏರಲೈನ್ಸಿನ ಗಗನ ಸಖಿ.

**1992 : ಸತ್ಯರಾಣಿ ಚಾಡಾ :** ಈಕೆಯ ಮಗಳು ವರದಕ್ಷಿಣೆಯ ಬೆಂಕಿಗೆ ಆಹುತಿಯಾದಳು. ಸತ್ಯರಾಣಿ ಆ ದಿನದಿಂದ ಇಂದಿನವರೆಗೂ, ತಾನು ಸ್ಥಾಪಿಸಿದ 'ಶಕ್ತಿ ಶಾಲಿನಿ' ಸಂಸ್ಥೆಯ ಮೂಲಕ ಸುಮಾರು 250 ವರದಕ್ಷಿಣೆ ಕೇಸುಗಳಲ್ಲಿ ಮಹಿಳಯರಿಗೆ ಸಹಾಯ ಮಾಡಿದ್ದಾರೆ, ಗಂಡನ ಮನೆಯವರು ಕಿತ್ತುಕೊಂಡ ವರದಕ್ಷಿಣೆಯನ್ನು ಹಿಂತಗೆದುಕೊಳ್ಳಲು ನೆರವಾಗಿದ್ದಾರೆ.

**1992 : ಸಾಧನಾ ಪವಾರ್ :** ಬೆಂಗಳೂರಿನಲ್ಲಿ ವಿಮಾನ ನೆಲಕಪ್ಪಳಿಸಿ ಬಿದ್ದು ಉರಿಯುವಾಗ, ಇಂಡಿಯನ್ ಏರಲೈನ್ಸಿನ ಗಗನ ಸಖಿ ಸಾಧನಾ, ಬಹಳಷ್ಟು ಪ್ರಯಾಣಿಕರ ಪ್ರಾಣ ಉಳಿಯಲು ಕಾರಣರಾದರು.

# ದುರ್ಬಲ ವರ್ಗದವರಿಗೆ ವಸತಿ

ದುರ್ಬಲ ವರ್ಗದವರಿಗೆ ವಿವಿಧ ಯೋಜನೆಗಳನ್ವಯು ಒಂದು ಲಕ್ಷ ಮನೆಗಳ ನಿರ್ಮಾಣ ಫಲಾನುಭವಿಗಳ ಆಯ್ಕೆಗೆ ವಿಶೇಷ ಸಮೀಕ್ಷೆ.

ಬಡವರಿಗೆ ಮನೆ ಒದಗಿಸುವುದು ರಾಜ್ಯ ಸರ್ಕಾರದ ಒಂದು ಪ್ರಮುಖ ಜವಾಬ್ದಾರಿ. ಆದರೆ ಕಳೆದೆರಡು ವರ್ಷಗಳಲ್ಲಿ ಕಾರ್ಯ ರೂಪಕ್ಕೆ ತರಲು ಸಾಧ್ಯವಾಗದಂತಹ ಗುರಿಗಳನ್ನು ನಿಗಧಿಪಡಿಲಾಗಿತ್ತು. ಕಳೆದ 3 ವರ್ಷಗಳಲ್ಲಿ ಆಶ್ರಯು ಯೋಜನೆಯು ಅಡಿಯಲ್ಲಿ 77,856 ಮನೆಗಳನ್ನೂ, ಡಾ:ಅಂಬೇಡ್ಕರ್ ಗೃಹನಿರ್ಮಾಣ ಯೋಜನೆಯು ಅಡಿಯಲ್ಲಿ 22,402 ಮನೆಗಳನ್ನೂ ಮತ್ತು ಇಂದಿರಾ ಆವಾಸ ಯೋಜನೆಯು ಅಡಿಯಲ್ಲಿ 23,148 ಮನೆಗಳನ್ನು ಕಟ್ಟಲಾಗಿದೆ. ವಾಸ್ತವಿಕವಾಗಿ ಕಾರ್ಯರೂಪಕ್ಕೆ ತರಬಹುದಾದಂತಹ ಗುರಿಯನ್ನು ಸರ್ಕಾರ ಹಾಕಿಕೊಳ್ಳುತ್ತದೆ. ಮುಂಬರುವ ವರ್ಷದಲ್ಲಿ, ಆಶ್ರಯು (60,000), ಅಂಬೇಡ್ಕರ್ ಗೃಹ ನಿರ್ಮಾಣ ಯೋಜನೆ (25,000) ಮತ್ತು ಇಂದಿರಾ ಆವಾಸ (15,000) ಯೋಜನೆಗಳ ಅಡಿಯಲ್ಲಿ ಒಟ್ಟು 1 ಲಕ್ಷ ಮನೆಗಳನ್ನು ಕಟ್ಟಲಾಗುವುದು. 1995-96 ಕೇಂದ್ರ ಬಜೆಟ್ಟನಲ್ಲಿ ಭಾರತ ಸರ್ಕಾರ ಪ್ರಕಟಿಸಿದಂತೆ ಹೆಚ್ಚಿನ ಹಣ ದೊರೆತಲ್ಲಿ ಇಂದಿರಾ ಆವಾಸ ಯೋಜನೆಯು ಅಡಿಯಲ್ಲಿ ಮನೆಗಳ ನಿರ್ಮಾಣದ ಗುರಿಯುನ್ನು ಅಷ್ಟರಮಟ್ಟಿಗೆ ಹೆಚ್ಚಿಸಲಾಗುವುದು. ಮನೆ ಇಲ್ಲದವರಿಗೆ ನಿವೇಶನಗಳನ್ನು ಮತ್ತು ಮನೆಗಳನ್ನು ಒದಗಿಸುವಲ್ಲಿ ಖಾಸಗಿ ವಲಯುಗಳೂ ಪಾಲ್ಗೊಳುವಂತೆ ಅನುವು ಮಾಡಿಕೊಡಲು ಭೂ ಸುಧಾರಣಾ ಕಾಯ್ದೆಗೆ ಅವಶ್ಯಕ ತಿದ್ದುಪಡಿ.

# ಸ್ಪಂದನ

## 'ಹೀಗೊಂದು ದಿನಚರಿ'

—ಸುಧಾ ರಮೇಶ್

'ಗೌರೀ' — ಬೆಚ್ಚಿದಳು ಗೌರಿ

'ಬಂದೇ ಅಕ್ಕಾ......' ಎಂದು ಓಡಿದಳು.

'ಎಲ್ಲೋ ಹಾಳಾಗಿದ್ದೆ, ಎಷ್ಟು ಸಲ ಕೂಗುವುದು?' ಎಂದು ನೀಲಾ ಗದರಿದಳು, 'ಪ್ರೀತಿಗೆ ಸ್ಕೂಲಿಗೆ ಲೇಟಾಯ್ತು ಶೂ ಪಾಲಿಷ್ ಮಾಡಿದೆಯಾ ?' ಒಡತಿಯ ಪ್ರಶ್ನೆಗೆ ಮೂಕವಾಗಿ ಗೌರಿ ತಲೆ ಅಲ್ಲಾಡಿಸಿದಳು. ಎಳೆಯ ಕೈಗಳು ಚಕಚಕನೆ ಶೂಗಳ ಮೇಲೆ ಓಡಾಡಿದವು. ಶೂಗಳಿಗೇ ಪಾಪ ಕನಿಕರ ಬಂತೋ ಎಂಬಂತೆ ಥಳಥಳಿಸಿದವು. ಪ್ರೀತಿಗೆ ಗೌರಿ ಶೂ ಹಾಕುವಷ್ಟರಲ್ಲಿ ಆಟೋ ಬಂದಾಗಿತ್ತು. ಅಮ್ಮ ಮಗಳ ವಿದಾಯದ ಮುತ್ತು ವಿನಿಮಯವಾಗುತ್ತಿದ್ದಾಗ ಗೌರಿ ಹೆಣಭಾರದ ಸ್ಕೂಲ್‌ಬ್ಯಾಗ್, ಲಂಚ್‌ಬ್ಯಾಗನ್ನು ಆಟೋ ಒಳಕ್ಕೆ ಇಡುತ್ತಿದ್ದಳು. 'ಮಮ್ಮೀ ಬೈ' — ರಾಗವಾದಿ ಅಮ್ಮನನ್ನು ಪ್ರೀತಿ ಬೀಳ್ಕೊಡಲು, ಢುರ್ ಎಂದು ಸದ್ದುಮಾಡುತ್ತ ಹೋಗುತ್ತಿದ್ದ ಆಟೋವನ್ನೇ ಆಸೆ ತುಂಬಿದ ಕಂಗಳಿಂದ ಗೌರಿ ನೋಡುತ್ತ ನಿಂತಳು.

ಹೌದು, ಅವಳಿಗೆ ಪ್ರೀತಿಯದೇ ವಯಸ್ಸಲ್ಲವೆ ? ಸ್ಕೂಲಿಗೆ ಹೋಗಬೇಕು, ನೀಟಾಗಿ ಯೂನಿಫಾರಂ ತೊಡಬೇಕು, ಠಸ್‌ಪುಸ್ ಅಂತ ಇಂಗ್ಲಿಷಿನಲ್ಲಿ ಮಾತನಾಡಬೇಕು ಅಂತ ಗೌರಿಗೆ ತುಂಬಾ ಆಸೆ, ಆದರೆ...... ಮನೆಯಲ್ಲಿ ಕಿತ್ತು ತಿನ್ನುವ ಬಡತನ, ಕುಡುಕ ಅಪ್ಪ, ಸದಾ ಜಗಳ ಮಾಡುವ ತಂಗಿ ತಮ್ಮಂದಿರು, ಹೀಗಾಗಿ ಆಸೆ ಬರೀ ಆಸೆಯಾಗಿ ಉಳಿಯಿತು. ಬಡವರ ಬಹುದೊಡ್ಡ ಬಂಡವಲು ಆಸೆ ತಾನೇ !

ಮಗಳಿಗೆ ಹೊಟ್ಟೆ ತುಂಬಾ ಊಟವಾದರೂ ಸಿಗುತ್ತದೆ ಎಂದು ತಾಯಿ ತಿಮ್ಮಿ ದೂರದ ಬೆಂಗಳೂರಿಗೆ ಮಗಳನ್ನು ನೀಲಾಳ ಜೊತೆ ಕಳುಹಿಸಿದ್ದಳು. ಗೌರಿ ನೀಲಾಳ ಸಹಾಯಕಿ, ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು, ಒಂದೇ ಎರಡೇ ? ಮಾಡಿದಷ್ಟು ಮುಗಿಯಲೊಲ್ಲದು. ಆ ಪುಟ್ಟ ಕೈಕಾಲುಗಳಿಗೆ ಬಿಡುವೆಂಬುದೇ ಗೊತ್ತಿಲ್ಲ, ರಾತ್ರಿಯಾಗುವ ವೇಳೆಗೆ ನಿದ್ರಾದೇವಿ ಗೌರಿಯನ್ನು ತಬ್ಬಿಕೊಳ್ಳಲು ಬಹಳ ಆತುರಪಡುತ್ತಿದ್ದಳು. ಆದರೆ ಎಲ್ಲರ ಊಟ ಮುಗಿದು, ತಟ್ಟೆ ತೊಳೆದು ಅಡಿಗೆಮನೆ ಸಾರಿಸಿ ಎಲ್ಲಾ ಕೆಲಸ ಮುಗಿವ ವೇಳೆಗೆ ಗೌರಿಗೆ ಸಾಕೋ ಸಾಕಾಗುತ್ತಿತ್ತು. ಆದರೂ ಕಿವಿಗಳು, ಪ್ರೀತಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಮುದ್ದುಮಾಡುತ್ತಾ ಅವಳಪ್ಪ ಹೇಳುವ ಕತೆಯನ್ನು ಕೇಳಿಸಿಕೊಳ್ಳುತ್ತಿದ್ದವು. ಮತ್ತೆ ಬೆಳಿಗ್ಗೆ ಬೇಗ ಏಳಬೇಕು. ಹೊಸ್ತಲು ಸಾರಿಸುವುದರಿಂದ ಕೆಲಸಗಳು ಮತ್ತೆ ಶುರು, ಚಳಿಯಲ್ಲಿ ನಡುಗುತ್ತಾ ಕೆಲಸಕ್ಕೆ ತೊಡಗುವಾಗ ಬೆಚ್ಚನೆಯ ಕನಸುಗಳೆಲ್ಲ ಕರಗುತ್ತಿದ್ದವು.

ಈಗೀಗ ರಾತ್ರಿ ಕನಸಿನಲ್ಲಿ ಪ್ರತಿ ದಿನ ಅಮ್ಮ ಗೌರಿಗೆ ಕಾಣಿಸಿಕೊಳ್ಳುತ್ತಿದ್ದಾಳೆ, ತಾನೂ ಒಳ್ಳೆಯ ಬಟ್ಟೆ ಧರಿಸಿ ಸ್ಕೂಲಿಗೆ ಹೊರಟ ಹಾಗೆ. ಅಮ್ಮ ತನ್ನನ್ನು ಎತ್ತಿ ಮುದ್ದಾಡುತ್ತಿರುವ ಹಾಗೆ...... ಆದರೇನು ಗೌರಿಯ ಕನಸು ನನಸಾಗುವುದೆ ?

ಇತ್ತ, ನಿದ್ರೆ ಬಾರದ ಗೌರಿಯ ಅಮ್ಮ ತಿಮ್ಮಿಗೆ ಹಾಗೇ ಏನೇನೋ ನೆನಪುಗಳು, ತಾನೂ ಗೌರಿಯ ಹಾಗೇ ಅಮ್ಮಾವ್ರ ಮನೆ ಕೆಲಸದ ಹುಡುಗಿ ಆಗಿದ್ದಾಗಿನ ನೆನಪು, ಆಗ ಆ ಮನೆಯಲ್ಲಿ ಅವಳು ತಿಂದ ಒದೆಗಳೇನೂ ಕಮ್ಮಿ ಇರಲಿಲ್ಲ. ಗೌರಿಯ ಹಾಗೇ ತಾನೂ ಕನಸು ಕಟ್ಟುತ್ತ ಕಟ್ಟುತ್ತ ಬೆಳೆದು ಹೆಣ್ಣಾಗಿ, ಹೆಂಡತಿಯಾಗಿ, ತಾಯಾಗಿ ಈಗ ಮೈ ತುಂಬಾ ಬಾಸುಂಡೆ ಬರಿಸಿಕೊಂಡು ನಿದ್ದೆ ಬಾರದೆ ಹೊರಳಾಡ್ತಿರೊಂದು ಅರಿವಿಗೆ ಬರುತ್ತಲೇ ಮೈ ಎಲ್ಲಾ ಚುರುಚುರುಗುಟ್ಟತೊಡಗಿತು. ಅದನ್ನು ಮರೆಯೋ ಹಾಗೇ ತಾನೇ ಗೌರಿ ಆಗಿ ತನ್ನಮ್ಮ ಈರಿ ತನ್ನನ್ನು ಮುದ್ದಾಡ್ತಿರೋ ಕನಸು ಕಾಣತೊಡಗಿದಳು.

> **ಸ್ಪಂದನ**
>
> **ಈ ಅಂಕಣದಲ್ಲಿ ಓದುಗರ ಅನಿಸಿಕೆಗಳನ್ನು ಸ್ವಾಗತಿಸುತ್ತೇವೆ. ನಿಮ್ಮ ಅನಿಸಿಕೆ ಒಂದು ಚಿಕ್ಕ ಟಿಪ್ಪಣಿಯ ರೂಪದಲ್ಲಿರಲಿ.**

# ಗೋರಿಯಿಂದೆದ್ದು ಬಂದ ತಂದೆ

—ನೇಮಿ

ಒಂದು ಚಲನಚಿತ್ರದ ಪ್ರಸಂಗ. ಊರ ಜಮೀನು ದಾರನ ಮೋಸದ ಬಲೆಗೆ ಬಿದ್ದು ಬಸಿರಾದ ಸುಬ್ಬಿ, ತುಂಬಿದ ಹೊಟ್ಟೆ ಹೊತ್ತು, ತನ್ನೊಡಲ ಕೂಸನ್ನು ಒಪ್ಪಿಕೊಳ್ಳುವಂತೆ ಅವನನ್ನು ಪರಿಪರಿಯಾಗಿ ಬೇಡಿ ಕೊಳ್ಳುತ್ತಾಳೆ, ಆತ ಮೀಸೆ ತಿರುವಿ ಜಬರಿಸಿ, 'ಊರ ಮುಂದಲ ಹಾದಿಯಲ್ಲಿ ಸಾವಿರಾರು ಜನ ನಡೆ ದಾಡಿರ್ತಾರೆ. ಅಲ್ಲಿ ಬಿದ್ದ ಹೆಜ್ಜೆ ಗುರುತು ನನ್ನದೇ ಎಂದು ಹೇಗೆ ಹೇಳ್ತೀಯ?' ಸವಾಲೆಸೆಯುತ್ತಾನೆ. ಹೆಣ್ಣು-ಗಂಡಿನ ಸಂಬಂಧದ ಕುಡಿ ಚಿಗುರಿದಾಗ, 'ಅದು ನನ್ನದಲ್ಲ' ಎಂದು ಕೈ ಎತ್ತಿ ನಡೆದ ಗಂಡುಗಳ ಪ್ರಕರಣ ಗಳು ನಮ್ಮ ಸಮಾಜದಲ್ಲಿ ವಿರಳವೇನಲ್ಲ.

ಇಂದು ಹೆಣ್ಣಿನ ಗರ್ಭದಲ್ಲಿ ಬಿದ್ದ ಹೆಜ್ಜೆ ಗುರುತು ಯಾರದು ಎಂದು ನಿಖರವಾಗಿ ಹೇಳಲು ಸಾಧ್ಯವಿದೆ ಗೊತ್ತೆ ? ಇಂದು ವಿಜ್ಞಾನ ತಮ್ಮ ತಂದೆತನದ ಜವಾಬ್ದಾರಿಯಿಂದ ಮುಖ ತಿರುಗಿಸುವ ವಿಶ್ವಾಮಿತ್ರ ರನ್ನು ಗುರುತಿಸಬಲ್ಲದಿದೆ. 50 ವರ್ಷಗಳ ಹಿಂದೆ ತನ್ನ ತಾಯಿಯನ್ನು ಬಲಾತ್ಕರಿಸಿ, ತನ್ನ ಜನ್ಮಕ್ಕೆ ಕಾರಣ ನಾಗಿ ಜಾರಿಕೊಂಡ ತಂದೆಯ ಹೂತ ಹೆಣವನ್ನು ಹೊರ ತೆಗೆದು 'ಇವನೇ ನನ್ನ ತಂದೆ' ಎಂದು ಸಾಬೀತು ಪಡಿಸಿದ ಡಯಾನಳ ಈ ಕತೆ, ಇಂದು ವಿಜ್ಞಾನ, ಸ್ತ್ರೀಯರ ಬದುಕಿಗೆ ನೀಡುತ್ತಿರುವ ಹೊಸ ತಿರುವುಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

'ತಾಯ್ತನ ಖಾತರಿಯದು, ತಂದೆತನ ಕೇವಲ ಊಹೆ' ಎಂಬ ಪ್ರಚಲಿತ ಆಡುಮಾತಿದೆ. ತಾಯಿ ಯಾರು ಎಂದು ಹೇಳುವಷ್ಟೇ ಸಲೀಸಾಗಿ ತಂದೆತನ ಸಾಬೀತಾಗದ ಕಾರಣ, ಈ ತಂದೆತನದ ನಿಖರತೆಗೆ, ಹೆಣ್ಣಿನ ಮೇಲೆ ಶೀಲದ ಹೊರೆ, ಹೊಸಿಲು ದಾಟದ ನಿರ್ಬಂಧ, ಪಾತಿವ್ರತ್ಯದ ಕಡಿವಾಣವನ್ನು ಶತಶತಮಾನದಿಂದ ಹೇರಲಾಗಿದೆ. ಹೆಂಡತಿಯ ಶೀಲದ ಸಂಶಯ ಎಷ್ಟೋ ಗಂಡಸರನ್ನು ಹುಟ್ಟಿದ ಕೂಸುಗಳ ಕೊಲೆಗೆ ನೂಕಿದೆ. ವಿವಾಹೇತರ ಸಂಬಂಧದಲ್ಲಿ ಹುಟ್ಟು ಸಂಭವಿಸಿದಾಗ ತಂದೆತನದ ಜವಾಬ್ದಾರಿಗಳಿಂದ ಜಾರಿಕೊಳ್ಳಲು ಅನು ಕೂಲವಾಗಿದೆ. ಆದರೆ ಇಂದು ಹೊಸ ತಂತ್ರಜ್ಞಾನವಾದ ಡಿ.ಎನ್.ಎ. ಪರೀಕ್ಷೆ ಹೊಸದೇ ಸಾಧ್ಯತೆಗಳನ್ನು ತೆರೆದಿದೆ.

1942, ಹದಿನೇಳು ವರ್ಷದ ಜೆನಿವೀವ್ ಲೋರಿ ಪದವೀಧರಳಾದಳು. ಅಮೆರಿಕೆಯ ಕಂಪನಿಯೊಂದಕ್ಕೆ ಕೆಲಸಕ್ಕೆ ಅರ್ಜಿ ಹಾಕಿದಳು, ಆದರೆ ವಯಸ್ಸು ಹದಿ ನೆಂಟಾಗದೆ ಕಾನೂನು ಪ್ರಕಾರ ಆಕೆ ಆ ಕೆಲಸಕ್ಕೆ ಸೇರು ವಂತಿರಲಿಲ್ಲ. ಆರು ತಿಂಗಳ ಮಟ್ಟಿಗೆ ಲೋರಿ, ಜಾನ್ ಬ್ರೂಕ್ಸ್ ಮತ್ತು ಆತನ ಪತ್ನಿ ಈದಾರಲ್ಲಿ ಕೆಲಸಕ್ಕೆ ಸೇರಿದಳು. ಸಾಕಷ್ಟು ಶ್ರೀಮಂತ ಈ ದಂಪತಿಗಳು ಒಂದು ಪೀಠೋಪಕರಣದ ಅಂಗಡಿಯನ್ನು ತೆರೆದಿದ್ದು, ಕಛೇರಿಯ ಬಹಳಷ್ಟು ಕೆಲಸವನ್ನು ಈದಾ ಮನೆ ಯಿಂದಲೇ ನಡೆಸುತ್ತಿದ್ದಳು. ಮಧ್ಯವಯಸ್ಸಿನ ಈ ದಂಪತಿಗಳಿಗೆ ಮಕ್ಕಳಿರಲಿಲ್ಲ. ಆರು ತಿಂಗಳು ಇವರಲ್ಲಿ ಲೋರಿ ಕೆಲಸ ಮಾಡಿದ್ದಳು, ಆಕೆಯ ಹದಿನೆಂಟನೇ ಹುಟ್ಟು ಹಬ್ಬ ಆಗಮಿಸಿತ್ತು. ಲೋರಿ ಇದೀಗ 'ಅಮೆರಿಕನ್ ಕೇನ್ ಅಂಡ್ ಕೇಬಲ್ ಕಂಪನಿ'ಗೆ ಸೇರಲು ಅರ್ಹಳಾಗಿದ್ದಳು. ಆ ಕಡೆಯ ಶನಿವಾರ ಆಕೆ ಜಾನ್ ಬ್ರೂಕ್ಸ್ ಅವರ ಮನೆಗೆ ಹೋದಾಗ ಈದಾ ಇನ್ನೂ ಅಂಗಡಿಯಿಂದ ಹಿಂತಿರುಗಿರಲಿಲ್ಲ. ಆಕೆಗೆ ವಿದಾಯ ಹೇಳಲೋಸುಗ ಲೋರಿ ಕಾಯುತ್ತಾ ಕುಳಿತಳು. ಜಾನ್ ಬ್ರೂಕ್ಸ್ ಅಲ್ಲಿಯೇ ಬಳಿ ಪತ್ರಿಕೆ ಓದುತ್ತಾ ಬಹಳ ಹೊತ್ತು ಕುಳಿತವ, ತಟ್ಟನೆ ಏನೊಂದೂ ಪೀಠಿಕೆ ಇಲ್ಲದೆ ಲೋರಿಯ ಮೇಲೆರಗಿ ಬಲಾತ್ಕರಿಸಿದ. ಎಲ್ಲವೂ ಕ್ಷಣದಲ್ಲಿ ಮುಗಿದಿತ್ತು. ಭಯದಿಂದ ನಡುಗಿದ ಲೋರಿ ದಿಗ್ಭ್ರಾಂತ ಳಾಗಿದ್ದಳು. ಯಾರೊಂದಿಗೆ ಹೇಳಲೂ ಹಿಂಜರಿದು ತನ್ನೊಳಗೇ ಹೇಸಿಗೆಯಿಂದ ಒದ್ದಾಡಿದಳು. ಲೈಂಗಿಕತೆಯ ಬಗ್ಗೆ ಸರಿಯಾಗಿ ಇನ್ನೂ ತಿಳಿದಿರದ ಈ ಹುಡುಗಿಗೆ ಬೆಳಗಿನ ವಾಂತಿ ಆರಂಭವಾಗಿ, ವೈದ್ಯರ ಬಳಿ ಹೋದಾ ಗಲೇ ತಾನು ಗರ್ಭಿಣಿ ಎಂಬ ಸತ್ಯ ಅರ್ಥವಾಗಿದ್ದು, ತಟ್ಟನೆ ಲೋರಿಯನ್ನು ಗುಟ್ಟಾಗಿ ಮಗು ಹೆರಲು ಕಳು ಹಿಸಲಾಯಿತು. ಆದರೆ ಆ ಸಣ್ಣ ಊರಿನಲ್ಲಿ ಲೋರಿಯ

ಬಸಿರು ಗುಪ್ತವಾಗಿ ಉಳಿಯಲಿಲ್ಲ. ಬ್ರೂಕ್ಸ್ ಊರ ತುಂಬಾ 'ಲೋರಿ ಯಾರೋ ಟ್ರಕ್ ಡ್ರೈವರ್ ಜೊತೆ ಒಂದು ರಾತ್ರಿ ಮಲಗಿದ ಫಲವಾಗಿ ಬಸಿರಾದಳು' ಎಂದು ಹೇಳಿಕೊಂಡು ಬಂದ. ಯಾರೂ ಲೋರಿಯ ಬಲಾತ್ಕಾರದ ಕತೆಯನ್ನು ನಂಬಲಿಲ್ಲ. ಬ್ರೂಕ್ಸ್ ದಂಪತಿಗಳಿಗೆ ಮಕ್ಕಳಿಲ್ಲದ್ದು ಲೋರಿಗೆ ವಿರುದ್ಧವಾಗಿ ಪುರಾವೆಯಾಗಿತ್ತು. ಬ್ರೂಕ್ಸ್‌ನ ವೀರ್ಯಾಣುಗಳ ಸಂಖ್ಯೆ ಅತಿ ಕಡಿಮೆ ಇತ್ತು. ಹಾಗಾಗಿ ಆತ ತಂದೆಯಾಗುವ ಸಾಧ್ಯತೆ ತೀರಾ ಸಣ್ಣದಿತ್ತು. ಆದರೆ ಲೋರಿಯ 'ಫಲವತ್ತತೆ' ಹೆಚ್ಚಿದ ಕಾರಣ, ಈ ಗರ್ಭ ಸಂಭವಿಸಿತ್ತು. ಜನರ ಕಣ್ಣಿಗೆ ಮಾತ್ರ ಲೋರಿ 'ಸಡಿಲ ಹೆಣ್ಣಾಗಿ' ಕಂಡಳು. ಲೋರಿಯ ಸೋದರಿಗೆ ನಿಶ್ಚಯವಾಗಿದ್ದ ವಿವಾಹ ಮುರಿದು ಬಿತ್ತು. ತಾಯಿ ತೀರಿಕೊಂಡಳು. ಅಪಮಾನದಿಂದ ಕುಸಿದು, ಎಲ್ಲರ ಅವಹೇಳನಕ್ಕೆ ಗುರಿಯಾದ ಲೋರಿ ಮನೆಯಿಂದ ಹೊರಗೆ ತಲೆ ಹಾಕುವುದೂ ಕಷ್ಟವಾಯಿತು. ಈ ಅಸಹನೀಯ ವಾತಾವರಣದಿಂದ ತಪ್ಪಿಸಿಕೊಳ್ಳಲು ಲೋರಿ ಹುಟ್ಟಿದ ಹೆಣ್ಣು ಕೂಸು ಡಯಾನ್‌ಳ ಜೊತೆ ಊರು ಬಿಟ್ಟಳು. ಮಗಳಿಗೆ ತಂದೆಯ ಕುರಿತು ಏನೊಂದೂ ವಿಷಯ ತಿಳಿಸದೆ 'ನಿನ್ನ ತಂದೆ ನೀ ಚಿಕ್ಕವಳಿದ್ದಾಗಲೇ ತೀರಿಕೊಂಡ' ಎಂದು ಹೇಳಿ ಬೆಳೆಸಿದಳು. ಆದರೆ ಡಯಾನ್ ಹನ್ನೊಂದು ವರ್ಷವಿದ್ದಾಗ ತನ್ನ ಜನ್ಮ ರಹಸ್ಯ ತಿಳಿದು ಆಘಾತಕ್ಕೊಳಗಾದಳು. ತಾನು ಅತ್ಯಾಚಾರದ ಫಲವೆಂದು ತಿಳಿದಾಗ, ತನ್ನ ತಾಯಿ ತನ್ನನ್ನು ಪ್ರೀತಿಸಲಾದರೂ ಹೇಗೆ ಸಾಧ್ಯ ಎಂದು ಕೊರಗಿದಳು. ಬೆಳೆದ ಡಯಾನಳಿಗೆ ಗಂಡಸರೆಂದರೆ ಅಸಹ್ಯ ಮೂಡಿತು. ಗಂಡು ಹೆಣ್ಣು ಸಂಬಂಧದಲ್ಲಿ ಸಹಜವಾಗಿರಲು ಅಸಾಧ್ಯವಾಯಿತು. ಪುರುಷರೊಡನೆಯ ಆಕೆಯ ಸಂಬಂಧಗಳು ಅಸಫಲವಾಗಿ, ಡಯಾನ್ ಎರಡು ಬಾರಿ ವಿಚ್ಛೇದನ ಪಡೆದಿದ್ದಳು. ಕಡೆಗೂ ತಂದೆಯನ್ನು ಹಿಡಿದು ಕೇಳಲು ನಿರ್ಧರಿಸಿದ ಡಯಾನ್, 1986ರಲ್ಲಿ ತಂದೆ ಬ್ರೂಕ್ಸ್‌ಗೆ ಫೋನ್ ಮಾಡಿದಳು. ಆದರೆ ಬ್ರೂಕ್ಸ್ 'ನಾನಲ್ಲ ನಿನ್ನ ತಂದೆ. ಯಾರೋ ಟ್ರಕ್ ಡ್ರೈವರ್ ಜೊತೆ ನಿನ್ನ ತಾಯಿ ಮಲಗಿದ್ದಳು' ಎಂದೇ ಸಾಧಿಸಿದ. ಅವನ ಮಾತುಗಳು ಸುಳ್ಳೆಂದು ಸಾಧಿಸಲು ಡಯಾನ್‌ಳ ಬಳಿ ಯಾವ ಪುರಾವೆಯೂ ಇರಲಿಲ್ಲ.

1992ರಲ್ಲಿ ಬ್ರೂಕ್ಸ್ ತೀರಿಕೊಂಡ. ಇದೀಗ ಹೊಸ ಡಿ.ಎನ್.ಎ. ತಂತ್ರಜ್ಞಾನ ಡಯಾನ್‌ಳ ಸಹಾಯಕ್ಕೆ ಒದಗಲಿತ್ತು. ಡಯಾನ್ ತನ್ನ ತಂದೆ ಬ್ರೂಕ್ಸ್ ಎಂಬುದನ್ನು ಸಾಬೀತು ಪಡಿಸಿ, ತನ್ನ ತಾಯಿಯ ಹೆಸರಿಗಂಟಿದ ಕಳಂಕವನ್ನು ತೊಳೆಯಲು ನಿರ್ಧರಿಸಿದಳು. ಸತ್ತ ತಂದೆಯ ಮೇಲೆ ದಾವೆ ಹೂಡಿದ ಡಯಾನ್, ಬ್ರೂಕ್ಸ್‌ನ ಉತ್ತರಾಧಿಕಾರಿ ತಾನೆಂದು ಸಾರಿದಳು. ಹತ್ತುವಾರಗಳ ಹಿಂದೆ ಹೂತಿದ್ದ ಬ್ರೂಕ್ಸ್‌ನ ದೇಹವನ್ನು ಹೊರ ತೆಗೆದು, ಆತನ ದೇಹದ ಮೂಳೆಯ ತುಂಡು ಹಾಗೂ ಮಾಂಸಖಂಡದ ಚೂರನ್ನು ತೆಗೆದುಕೊಂಡು ಡಿ ಎನ್.ಎ. ಪರೀಕ್ಷೆಗೆ ಒಳಪಡಿಸಲಾಯಿತು. ಬ್ರೂಕ್ಸ್ ಡಯಾನ್‌ಳ ತಂದೆ ಎಂದು ಸ್ಪಷ್ಟವಾಗಿ ಸಾಬೀತಾಯಿತು. ಆದರೆ ಮಿಷಿಗನ್ ಕಾನೂನಿನ ಪ್ರಕಾರ ಬಲಾತ್ಕಾರದಿಂದ ಹುಟ್ಟಿದ ಮಕ್ಕಳಿಗೆ ಆಸ್ತಿಯಲ್ಲಿ ಹಕ್ಕಿರಲಿಲ್ಲ. ಡಯಾನ್ ಮಿಷಿಗನ್ ಕಾನೂನು ಬದಲಾಗಲು ಕಾರಣಳಾದಳು. ಕಳೆದ ವರ್ಷ ಅಕ್ಟೋಬರ್ ತಿಂಗಳಿನಲ್ಲಿ ಮಿಷಿಗನ್ ಕಾನೂನು ಬದಲಾಗಿ, ಅತ್ಯಾಚಾರದ ಫಲವಾಗಿ ಹುಟ್ಟಿದ ಮಕ್ಕಳಿಗೂ ವಾರಸುದಾರ ಹಕ್ಕುಗಳನ್ನು ನೀಡಿತು. ಡಯಾನ್ ತಂದೆ ಬ್ರೂಕ್ಸ್‌ನ ಆಸ್ತಿಗೆ ಹಕ್ಕುದಾರಳಾದದ್ದಷ್ಟೇ ಅಲ್ಲ, ತನ್ನ ತಾಯಿಯ ಬಲಾತ್ಕಾರದ ಸತ್ಯವನ್ನು ಐವತ್ತು ವರ್ಷದ ನಂತರ ಬಯಲು ಮಾಡಿದಳು.

ಬದುಕಿಡೀ ತನ್ನ ಅಪರಾಧವನ್ನು ಮುಚ್ಚಿಟ್ಟು 'ನಾನಲ್ಲ'ವೆಂದು ಸಾಧಿಸಿ, ಲೋರಿಯ ಶೀಲದ ಮೇಲೆ ಅಪಾದನೆ ಹೇರಿ ತಪ್ಪಿಸಿ ಕೊಂಡಿದ್ದ ಬ್ರೂಕ್ಸ್, ಗೋರಿಯಿಂದೆದ್ದು ಬಂದು ತನ್ನ ತಪ್ಪನ್ನು, ತನ್ನ ಮಗಳನ್ನು ಒಪ್ಪಿಕೊಳ್ಳಬೇಕಾಯಿತು !

---

'ಅಫ್ರಾ' ಎಂಬುದು ಮೊಟ್ಟ ಮೊದಲ ಆಧುನಿಕ ಸ್ತ್ರೀವಾದಿ ಸಾಹಿತ್ಯಿಕ ಪತ್ರಿಕೆ. 1969ರಲ್ಲಿ ಎಲಿಜಬೆತ್ ಫಿಷರ್ ಆರಂಭಿಸಿದ ಈ ಪತ್ರಿಕೆ, ನ್ಯೂಯಾರ್ಕಿನಿಂದ ಮೂರು ತಿಂಗಳಿಗೊಮ್ಮೆ ಪ್ರಕಟವಾಗುತ್ತಿದ್ದು, 1979ರ ವರೆಗೂ ಸತತವಾಗಿ ಹೊರಬಂದಿತು. 'ಅಫ್ರಾಬೆನ್'ಳ ಗೌರವಾರ್ಥವಾಗಿ 'ಅಫ್ರಾ' ಎಂದು ಹೆಸರಿಟ್ಟ ಈ ಪತ್ರಿಕೆಯಲ್ಲಿ ಕತೆ, ಕವನಗಳಲ್ಲದೆ, ವಿಚಾರ ಪ್ರಚೋದಕ ಸ್ತ್ರೀವಾದಿ ಲೇಖನಗಳಿರುತ್ತಿದ್ದವು.



## ಪ್ರೀತಿಯ ಅಚಲ

ನಿನಗೆ ಬರೆದ ನನ್ನ ಹಿಂದಿನ ಪತ್ರ ಹಲವರಿಗೆ ಮುದ ನೀಡಿದೆಯಂತೆ. ಇಂಥ ಮಾತುಗಳು ಮುಖತಃ ನನಗೆ ಬಂದಾಗ ಎಷ್ಟೊಂದು ಸಂತೋಷವಾಯಿತು ಗೊತ್ತ ? ಇಂಥ ಪತ್ರಗಳ ಸೃಷ್ಟಿಯ ಪ್ರೇರಣೆಯೂ ಅದೇ ಉಪಾಂತವೂ ಅದೇ ತಾನೆ ?

ಮೊನ್ನೆ ಮತ್ತೆ ಹಾಲವ್ವ ಬಂದಿದ್ದಳು ಅವಳಿಗೆ ಹೇಳಿದೆ "ನೋಡು ನಿನ್ನ ವಿಚಾರ ಈ ಕಾಗದದಲ್ಲಿ ಬರೆದಿದ್ದೇನೆ'' ಅಂತ. ಅವಳು ತನ್ನ ಕಪ್ಪುಮುಖದಲ್ಲಿ ಶುಭ್ರವಾದ ಬಿಳಿಯ ಹಲ್ಲುಗಳನ್ನು ಮುಗ್ಧವಾಗಿ ಪ್ರದರ್ಶಿಸುತ್ತಾ "ಹೌದೇನ್ರಮ್ಮ ?'' ಎಂದಳು. ಅಕ್ಷರ ಜಗತ್ತಿನಿಂದ ದೂರ ಇರುವ ಈ ಶ್ರಮಜೀವಿಗಳ ಮುಗ್ಧತೆ, ತಮಗೆ ಅರಿಯದ ಪ್ರಪಂಚದ ಬಗ್ಗೆ ನಿರ್ಮೋಹ, ತುಂಬ ಗಮನಿಸುವಂತಹ ಅಂಶಗಳು. ಅಕ್ಷರಸ್ಥರಲ್ಲಿ ಈ ಎರಡೂ ಗುಣಗಳನ್ನು ಟಾರ್ಚ್ ಹಿಡಿದುಕೊಂಡು ಹುಡುಕಿದರೂ ಸಿಗುವುದಿಲ್ಲ ಖಂಡಿತಾ. ಅದರಲ್ಲೂ ತಮಗೆ ತಿಳಿಯದ ವಿಚಾರಗಳನ್ನು ತಿಳಿದಿದೆ ಎಂದು ತೋರಿಸಿಕೊಳುವ ಢಾಂಬಿಕತೆ ಈಗೀಗ ಅಸಹ್ಯ ಬರಿಸುವಷ್ಟು ಹೆಚ್ಚಾಗಿದೆ.

ಮೊನ್ನೆ ನಡದ ಒಂದು ಸಂಗತಿಯನ್ನು ನಿನ್ನ ಬಳಿ ನಾನು ಹೇಳಿಕೊಳ್ಳಲೇ ಬೇಕು. ಬೆಂಗಳೂರಿನಿಂದ ಹೊರಗೆ ಸುಮಂಗಲಿ ಸೇವಾಶ್ರಮದಲ್ಲಿ ನಡೆದ ಒಂದು ಕಾರ್ಯಕ್ರಮ. ನನಗೆ ಅಲ್ಲಿ ಒಂದು ಪ್ರಬಂಧ ಮಂಡಿಸುವ ಅವಕಾಶ. ಕಾಲೇಜುಗಳಲ್ಲಿ, ಸಾಹಿತ್ಯದ ವೇದಿಕೆಗಳಲ್ಲಿ ಭಾಗವಹಿಸಿ ರೂಢಿಇರುವ ನನಗೆ ಇದೊಂದು ಭಿನ್ನವಾದ ಅವಕಾಶ. ನನಗೂ ಕುತೂಹಲ ಪ್ರೇಕ್ಷಕರು ಯಾವ ಮಟ್ಟದವರಿರಬಹುದು ? ಹಳ್ಳಿಯ ಹೆಣ್ಣು ಮಕ್ಕಳೇ, ಅಥವಾ ವಿದ್ಯಾವಂತರೇ ಇತ್ಯಾದಿ. ನಾವು ಯಾವಾಗಲೂ ಒಂದು ತಪ್ಪುಮಾಡುತ್ತೇವೆ ಗೊತ್ತ ? ಸ್ಕೂಲು ಕಾಲೇಜುಗಳ ವಿದ್ಯೆಯನ್ನೇ 'ವಿದ್ಯೆ' ಎಂದು ತಿಳಿದು, ಅದೇ ಸ್ಕೇಲಿನಿಂದ ಎಲ್ಲರನ್ನೂ ಅಳೆಯುವುದು!

ಅಲ್ಲಿಗೆ ಹೋದಾಗ ನನಗೆ ಒಂದು ಅದ್ಭುತ ಆಶ್ಚರ್ಯಕಾದಿತ್ತು. ಅಲ್ಲಿ ಶಿಬಿರಾರ್ಥಿಗಳಾಗಿ ಬಂದಿದ್ದ ಹಳ್ಳಿಯ ಹೆಣ್ಣು ಮಕ್ಕಳು, (ಹಳ್ಳಿಯೆಂದರೆ ತೀರಾ ದೂರದ ಹಳ್ಳಿಗಳಲ್ಲ ಬೆಂಗಳೂರಿನ ಸುತ್ತ ಮುತ್ತ ಇರುವ ಹಳ್ಳಿ) ಆದರೆ ಬದುಕನ್ನು ಊಟ, ತಿಂಡಿ, ನಿದ್ದೆಗಷ್ಟಕ್ಕೇ ಸೀಮಿತಗೊಳಿಸಿಕೊಳ್ಳದೇ ಅದರಾಚೆಗಿರುವ ಸಮುದಾಯದ ಶಕ್ತಿಯನ್ನು, ಸಂಘಟನೆಯ ಮಹತ್ವದ ಅರಿವನ್ನೂ ಪಡೆದವರು. ಯುವತಿ ಮಂಡಲಿಗಳ ಅಧ್ಯಕ್ಷೆ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್ ಬೋರ್ಡಿನ ಅಧ್ಯಕ್ಷೆ, ಉಪಾಧ್ಯಕ್ಷೆ, ಹೀಗೆ ಒಂದಲ್ಲಾ ಒಂದು ಕರ್ತವ್ಯವನ್ನು ಹಿಡಿಯಲ್ಲಿಟ್ಟು ಕೊಂಡು ಅದನ್ನು 'ಚೆಂದ' ಮಾಡುವ ತವಕದಲ್ಲಿರುವವರು. ನನಗಂತೂ ಅವರನ್ನೆಲ್ಲಾ ನೋಡಿ ಎಷ್ಟೊಂದು ಖುಷಿಯಾಯಿತು ಅಂತಿ !

ಕಾರ್ಯಕ್ರಮದ ಉದ್ಘಾಟನೆ ವಿಧ್ಯುಕ್ತವಾಗಿ ನಡೆಯಿತು. ಉದ್ಘಾಟನಾ ಭಾಷಣಕಾರರು ಈ ಮಹಿಳೆಯರಿಗೆ ಅರಿವನ್ನು ಬೆಳೆಸಿಕೊಳ್ಳಲು, ನಮ್ಮ ಸುತ್ತ ನಡೆಯುತ್ತಿರುವ ಅನ್ಯಾಯಗಳನ್ನು ಗ್ರಹಿಸಲು, ಅದರ ವಿರುದ್ಧ ಹೋರಾಡುವ ಮನೋಬಲವನ್ನು ಬೆಳೆಸಿಕೊಳ್ಳಲು ಕರೆ ಇತ್ತದ್ದೂ ಆಯಿತು. ಅದು ಅಷ್ಟೊಂದು ಬೇಗ ಫಲಪ್ರದವಾಗುತ್ತದೆ ಎಂದು ನಾನಂತೂ ಊಹಿಸಿರಲಿಲ್ಲ.

ನಂತರ ನಡೆದದ್ದೇ ತುಂಬಾ ಸ್ವಾರಸ್ಯಕರ ಘಟನೆ. 'ಪೋಲೀಸು ಮತ್ತು ಮಹಿಳೆ' ವಿಚಾರವಾಗಿ ಮಾತನಾಡಲು ಮಹಿಳಾ ಇನ್ಸ್‌ಪೆಕ್ಟರ್ ಒಬ್ಬರ ಆಗಮನವಾಗಿತ್ತು. ಪೋಲೀಸು ಅಂದ ಕೂಡಲೆ ನಮ್ಮಂತಹ ಸಾಮಾನ್ಯರ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಏಳುತ್ತವೆ ಅಲ್ಲವೆ ? ಪೋಲೀಸರೇಕೆ ಸಾಮಾನ್ಯ ಜನರ ಮಿತ್ರರಾಗಿಲ್ಲ ? ಅವಿದ್ಯಾವಂತರನ್ನು ಪೋಲೀಸರು ನಡೆಸಿಕೊಳ್ಳುತ್ತಿರುವ ರೀತಿ ಸರಿಯಿದೆಯೆ ? ಅನ್ಯಾಯವಾದರೂ ನ್ಯಾಯಕ್ಕಾಗಿ ಮಹಿಳೆಯರು ಪೋಲೀಸ್ ಠಾಣೆಗಳಿಗೆ ಹೋಗಲು ಹೆದರಿಕೊಳ್ಳುವ ವಾತಾವರಣವೇ ಇದೆಯಲ್ಲ ಏಕೆ ? ಇಂಥ ಹತ್ತು ಹಲವು ಪ್ರಶ್ನೆಗಳು ಅಲ್ಲಿದ್ದ ಎಲ್ಲರಲ್ಲೂ ಗುಡ್ಡೆ ಗುಡ್ಡೆಗಳಾಗಿತ್ತು. ನಿಜ ಒಬ್ಬ

ಪೋಲೀಸ್ ಅಧಿಕಾರಿಣಿ ಇಡೀ ಪೋಲೀಸು ಇಲಾಖೆಯ ಯಜಮಾನಳಂತೆ ಉತ್ತರಿಸುವುದು ಸಾಧ್ಯವೂ ಇಲ್ಲ ಸಾಧುವೂ ಅಲ್ಲ, ಆದರೆ ಆಕೆ ಈ ಮೂಲಭೂತ ತಿಳಿವನ್ನು ಮರೆತು ಎಲ್ಲ ಪೋಲೀಸರ ರಾಯಭಾರಿಯಂತೆ ಮಾತನಾಡತೊಡಗಿದ್ದೂ ಮತ್ತು ಅಲ್ಲಿದ್ದ ಪ್ರೇಕ್ಷಕವರ್ಗವೆಲ್ಲ ತಿಳಿವಳಿಕೆಯೇ ಇಲ್ಲದ ಅಜ್ಞಾನಿಗಳೆಂದು ಪರಿಗಣಿಸಿದ್ದೂ ತೀರಾ ಹಾಸ್ಯಾಸ್ಪದವಾಗಿತ್ತು. ಪ್ರಶ್ನೆಗಳಿಂದ ಉಂಟಾದ ಕಿರಿಕಿರಿಯಿಂದ ಪದೇಪದೇ ತನ್ನ ಸಮತೋಲನವನ್ನು ಕಳೆದು ಕೊಳ್ಳುತ್ತಾ ಧ್ವನಿ ಎತ್ತರಿಸುತ್ತಿದ್ದುದೂ ಹೀಗೇಕೆ ಎಂದು ಕೇಳಿದವರಿಗೆ 'ನನ್ನ ಧ್ವನಿ ಇರುವುದೇ ಹಾಗೆ' ಎಂದುತ್ತರಿಸುತ್ತಿದುದೂ ಬಾಲಿಶವಾಗಿತ್ತು.

ಇಂಥ ಸಭೆಗಳಿಗೆ ಬರುವ ಅಧಿಕಾರಿಗಳು ಒಂದು ವಿಷಯವನ್ನು ಜಾಗ್ರತೆಯಿಂದ ತಿಳಿದು ಮತ್ತೆ ಮತ್ತೆ ಮನನ ಮಾಡಿಕೊಳ್ಳುವುದು ತೀರಾ ಅವಶ್ಯಕ. ತಾವು ಕೆಲಸ ಮಾಡುವ ಇಲಾಖೆಯಾಗಲೀ, ಸಂಘ ಸಂಸ್ಥೆಗಳಾಗಲೀ, ಕಂಪನಿಗಳಾಗಲೀ ಯಾವುದೇ ವ್ಯವಸ್ಥಿತ ಚೌಕಟ್ಟುಗಳು ಅತ್ಯಂತ ಪರಿಪೂರ್ಣವಾಗಿ ಏನೂ ಇರುವುದಿಲ್ಲ. ಎಲ್ಲದರಲ್ಲೂ ಲೋಪದೋಷಗಳು ಸಾಕಷ್ಟು ಇರುತ್ತವೆ. ಮತ್ತು ಅಂಥವು ಜನರ ತಿಳಿವಳಿಕೆಗೂ ಬಂದಿರುತ್ತವೆ. ಈ ಸತ್ಯವನ್ನು ಮೊದಲು ಇಂಥ ಅಧಿಕಾರಿಗಳು ಒಪ್ಪಿಕೊಂಡು, ಯಾವ ವೈಭವೀಕರಣವಿಲ್ಲದೆ ತಾವು ಒಪ್ಪಿಕೊಂಡಿರುವ ವಿಷಯವನ್ನು ಸಪ್ರಾಮಾಣಿಕತೆಯಿಂದ ಬಹಿರಂಗಗೊಳಿಸಿ ನಂತರ ಇಂಥ ವ್ಯವಸ್ಥೆಯೊಳಗೇ ತಮ್ಮಂತಹ ಅಧಿಕಾರಿಗಳು ಸಮಾಜಕ್ಕೆ ಏನು ಉಪಕಾರ ಮಾಡಬಹುದು ಎನ್ನುವ ಚಿಂತನೆಯನ್ನೂ ಇಂಥ ಸಭೆಗಳಲ್ಲಿ ಬಹಿರಂಗವಾಗಿಯೇ ಮಾಡುವುದು ಸೂಕ್ತ. ಆಶ್ವಾಸನೆಗಳನ್ನು ಕೊಡುವ ಅಗತ್ಯವಿಲ್ಲ. ತುಂಬಿದ ಸಭೆಯ ಒಳಗೇ ತಮ್ಮನ್ನು ಗುರ್ತಿಸಿ ಕೊಳ್ಳುವುದು ಅಗತ್ಯ.

ಶಿಬಿರಾರ್ಥಿಗಳು ತೀರ ಮುಗ್ಧರೂ, ಮೊದ್ದುಗಳೂ ಏನೂ ಆಗಿರಲಿಲ್ಲ. ಅವರೆಲ್ಲ ಒಂದಲ್ಲ ಒಂದು ರೀತಿ ಸಮಾಜ ಸೇವೆಗೆ ಹೊರಟವರು. ಬೇರೆಯವರ ಸಂಕಷ್ಟ ಪರಿಹರಿಸುವ ಸಲುವಾಗಿ ಠಾಣೆಗಳ ಮೆಟ್ಟಲು ಹತ್ತಿ ಕಹಿ ಅನುಭವಪಡೆದವರು. ಒಬ್ಬಾಕೆ ಹೇಳಿದರು— ಆಕೆಯ ಪರಿಚಯಸ್ಥ ಮಹಿಳೆಯ ಗಂಡನ ಕೊಲೆಯಾಯಿತು. ತಕ್ಷಣ ಪೋಲೀಸ್ ಕಂಪ್ಲೇಂಟ್ ಮಾಡಿದ್ದೂ ಆಯಿತು. ಅಪರಾಧಿಗಳ ಬಂಧನವೂ ಆಯಿತು. ಕೆಲವೇ ದಿನಗಳಲ್ಲಿ ಅಪರಾಧಿಗಳನ್ನು ಜಾಮೀನಿನ ಮೇಲೆ ಬಿಡುಗಡೆಮಾಡಲಾಯಿತು ಮತ್ತು ಆ ದಿನ ಹಾಕಿದ F.I.R ನಲ್ಲಿದ್ದ ಕೊಲೆಯನ್ನು ಮೆಡಿಕಲ್ ರಿಪೋರ್ಟ್ ನಂತರ ಹೃದಯಾಘಾತ ಎಂದು ಬದಲಾಯಿಸಲಾಯಿತು. ಮುಂದೆ ಕೇಸು ಏನಾಯಿತು ಎನ್ನುವುದೇ ಗಂಡನನ್ನು ಕಳದುಕೊಂಡ ಮಹಿಳೆಗೆ ಗೊತ್ತಿಲ್ಲ. ಅಪರಾಧಿಗಳು ಈಕೆಯಪಕ್ಕದ ಮನೆಯವರೇ ಆದ್ದರಿಂದ ವಾಪಸ್ ಬಂದು ರಾಜಾರೋಷವಾಗಿ ಈಕೆಯನ್ನು ಮತ್ತಷ್ಟು ಹಿಂಸಿಸುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ಅನ್ಯಾಯಕ್ಕೊಳಗಾದವರು ಏನು ಮಾಡಬೇಕು ?

ಮತ್ತೊಬ್ಬಾಕೆಯ ವರದಿ. ಆಕೆಯ ಪರಿಚಯದ ತರುಣಿ ಇತ್ತೀಚೆಗೆ ವಿವಾಹವಾದವಳನ್ನು ಗಂಡನ ಮನೆಯವರು ವರದಕ್ಷಿಣೆಗಾಗಿ ಹಿಂಸಿಸುತ್ತಿದ್ದಾರೆ. ಮನೆಯ ಹಿಂಬದಿಯಲ್ಲಿ ಕಕ್ಕಸ್ಸಿನ ಹತ್ತಿರದಲ್ಲಿ ಆಕೆಯನ್ನು ಇರಿಸಿ, ಊಟತಿಂಡಿ ಕೊಡದೆ ಕಾಡುತ್ತಿದ್ದಾರೆ. ಅದು ಪ್ರೇಮ ವಿವಾಹ ಹಾಗೂ ಎಲ್ಲ ಪ್ರೇಮ ವಿವಾಹದ ಫಲ ಶ್ರುತಿಯಂತೆ ಆಕೆಯ ತೌರಿನವರು ದೂರವಾಗಿದ್ದಾರೆ. ಪಕ್ಕದ ಮನೆಯ ಸುಹೃದಯಿ ಮಹಿಳೆಯೊಬ್ಬರು ಈ ಬಗ್ಗೆ ಪೋಲೀಸ್ ಕಂಪ್ಲೇಂಟ್ ಕೊಡಲು ಹೋದರೆ ಆ ಠಾಣೆಯ ಯಜಮಾನ ಇಂಥ ಕೇಸ್‌ಗಳನ್ನು ತರಬೇಡಿ ಎಂದು ಗದರು ಹಾಕುತ್ತಾನೆ. ಇದಕ್ಕೇನು ಪರಿಹಾರ ?

ಇಂಥ ನೂರಾರು ಪ್ರಶ್ನೆಗಳಿದ್ದವು ಅಲ್ಲಿ. ಇಂಥದ್ದಕ್ಕೆಲ್ಲಾ ನಮ್ಮ ಪೋಲೀಸ್ ಅಧಿಕಾರಿಣಿಯ ಪರಿಹಾರ ಕೇಳು. ಬೆಚ್ಚಿಬೀಳಬೇಡ ಮತ್ತೆ ! ಮೊದಲನೆ ಕೇಸಿಗೆ ಉತ್ತರ F.I.R ಎಂದಿಗೂ ಬದಲಾಗುವುದೇ ಇಲ್ಲವಂತೆ. ಆರೋಗ್ಯವಂತ ಮನುಷ್ಯನನ್ನು ಚಚ್ಚಿಹಾಕಿ ಆಸ್ಪತ್ರೆ ಸೇರಿಸಿದನಂತರ ಅವ ಸತ್ತರೆ ಅದು ಹೃದಯದ ರೋಗವೇ ಅಂತೆ ! ಹಾಗೊಂದು ವೇಳೆ ಅದು ಅಸ್ವಾಭಾವಿಕ ಸಾವಾಗಿಯೂ ಹಾರ್ಟ್ ಫೈಲ್ಯೂರ್ ಎಂದು ವರದಿ ಯಾದರೆ ಅದು ವರದಿ ಮಾಡಿದ ಡಾಕ್ಟರ್

ತಪ್ಪೇ ವಿನಃ ಮತ್ತ್ಯಾರದ್ದೂ ಅಲ್ಲವಂತೆ ! ಹೀಗೇ ಅನೇಕ ಪ್ರಶ್ನೆಗಳೇ ಹುಟ್ಟುವಂತಹ ರಡಿಮೇಡ್ ಉತ್ತರಗಳು ನನ್ನನ್ನಂತೂ ದಂಗುಬಡಿಸಿತ್ತು.

ವಧು ದಹನ ಮತ್ತು ಅತ್ತೆಮನೆಯ ಸಂಕಷ್ಟಗಳಿಗೆ ಆಕೆ ಕೊಟ್ಟ ಉತ್ತರವಂತೂ ಒಂದು ಉತ್ತಮ ಹಾಸ್ಯ ಲೇಖನಕ್ಕೆ ವಸ್ತುವಿನಂತಿತ್ತು. ಈ ಬಗ್ಗೆ ಮಾತನಾಡಲು ಹೊರಟ ಶಿಬಿರಾರ್ಥಿಯ ಮಾತು ಕೇಳಿಸಿ ಕೊಳ್ಳುವ ತಾಳ್ಮೆಯೂ ಇರಲಿಲ್ಲ ಆಕೆಗೆ ! "ನಮ್ಮ ಪರಿಚಿತರ ಹೆಣ್ಣು ಮಗಳನ್ನು ಆಕೆಯ ಅತ್ತೆ ಮನೆಯವರು ಹೆರಾಜ್ ಮಾಡುತ್ತಿದ್ದಾರೆ'' ಎಂದು ಹೇಳುತ್ತಿದ್ದಂತೆ ಈ ಪೋಲೀಸು ಅಧಿಕಾರಿಣಿ ಗುಡಿಗಿದರು "ತಾಳಿ ತಾಳಿ ಏನು ಹೆರಾಜ್ ಅಂದ್ರೆ ಮದುವೆಯಾದ ತಕ್ಷಣ ಗಂಡ ಕೈಕಟ್ಟಿ ಹೆಂಡತಿಯ ಮುಂದೆ ನಿಂತು 'In what way I can help you Madam' ? ಅಂತ ಕೇಳ ಬೇಕೆಂದು ಬಯಸಿದರೆ ಆಗಲ್ಲ, ಮದುವೆಯಾದ ತಕ್ಷಣ ಸೊಸೆ ಮಾಡಿದ ಅಡಿಗೆಗಳನ್ನೆಲ್ಲಾ 'ತುಂಬಾ ಚೆನ್ನಾಗಿದೆ' ಅಂತ ಅತ್ತೆ ತಿನ್ನಬೇಕು ಅಂತ ಬಯಸಿದರೆ ಆಗಲ್ಲ, ಹಾಗೆ ಮಾಡದಿದ್ದರೆ ಈ ಹೆಣ್ಣು ಮಕ್ಕಳು ಹೆರಾಜ್ ಅಂದು ಬಿಡುತ್ತಾರೆ. ಹುಡುಗಿಯರು ಗಂಡನ ಮನೆಯಲ್ಲಿ ಹೊಂದಿಕೊಂಡು ಬಾಳುವುದನ್ನು ಮೊದಲು ಕಲಿಯ ಬೇಕು "...ಇತ್ಯಾದಿ ಇತ್ಯಾದಿ.

ಈಕೆ ಇನ್ನೂ ಯಾವ ಶತಮಾನದಲ್ಲಿದ್ದಾರೆ ? ಈಕೆ ನಿಜಕ್ಕೂ ಮಹಿಳೆಯರ ಸಂಕಷ್ಟಗಳಿಗೆ ಸ್ಪಂದಿಸ ಬೇಕಾದಂತಹ 'ವರದಕ್ಷಿಣೆಯಿಂದ ಆದ ಅನ್ಯಾಯ ಸರಿಪಡಿಸುವ' ವಿಭಾಗದ ಮುಖ್ಯಸ್ಥೆಯೇ ? ಸಮಾಜದ ಕ್ರೂರ ಸಂಪ್ರದಾಯಗಳಿಂದಾದ ಅನ್ಯಾಯಗಳಿಗೆ ಅಷ್ಟೋ ಇಷ್ಟೋ ನ್ಯಾಯ ದೊರಕಿಸ ಬಲ್ಲ ಸಾಧ್ಯತೆಯಿರುವ ವ್ಯಕ್ತಿಯ ಮನಸ್ಸಿನ ನೆಲೆ ಬೆಲೆಗಳು ಈ ರೀತಿ ಇರಬಹುದೇ ? ಇನ್ನೂ ಏನೇನೋ ಪ್ರಶ್ನೆಗಳು ಕಾಡಿದವು ಆ ಕ್ಷಣದಲ್ಲಿ ನನ್ನನ್ನು !

'ಅತ್ತೆಯ ಮನೆಯಲ್ಲಿ ತೂತಾಗಿ ಇರಬೇಕು, ಹೊತ್ತಾಗಿ ನೀಡಿದರು ಉಣಬೇಕು' ಎನ್ನುವ ನಡವಳಿಕೆಯನ್ನು ಮೈಗೂಡಿಸಿ ಕೊಂಡು, ಗಂಡ ಚಚ್ಚಿದರೆ ಚಚ್ಚಿಸಿಕೊಂಡು, ಅತ್ತೆ ಸುಟ್ಟರೆ ಸುಡಿಸಿಕೊಂಡು, ಶತ ಶತಮಾನಗಳಿಂದ ಈ ವ್ಯವಸ್ಥೆಯಲ್ಲೇ ಏಳುಬೀಳುತ್ತಿರುವ ನಮ್ಮ ಹೆಣ್ಣು ಮಕ್ಕಳಿಗೆ ಪ್ರಬಲ ಶಕ್ತಿಯಾದ ಸರ್ಕಾರದವತಿಯಿಂದ ಇಂಥ ಹಿತೋಪದೇಶ ! ರೂಪ್ ಕನ್ವರ್‌ಗೆ ಗುಡಿ ಕಟ್ಟಿಸುವ ಮನೋಭಾವ.

ಇಂಥ ಪರಿಸ್ಥಿತಿಯನ್ನು ಕಂಡಾಗ ನನಗನ್ನಿಸುವುದು ಒಂದೇ ಈ ಪೋಲೀಸು ಅಧಿಕಾರಿಣಿಯ ಹಾಗೇ ಅನೇಕ ಹುದ್ದೆಗಳಲ್ಲಿರುವ ಅನೇಕ ಮಹಿಳೆಯರು, ಗಂಡುಗಳು ಇಟ್ಟ ಅವೈಜ್ಞಾನಿಕ, ಅವಮಾನವೀಯ ಹೆಜ್ಜೆಗಳಲ್ಲಿ ತಮ್ಮ ಹೆಜ್ಜೆಗಳನ್ನು ಎಲ್ಲಿಯವರೆಗೆ ಜೋಡಿಸುತ್ತಾ ಸಾಗುತ್ತಾರೋ, ಪುರುಷಪ್ರಧಾನ್ಯರು ಬಿಟ್ಟ ಉಸಿರನ್ನು ತಾವೂ ಎಲ್ಲಿಯವರೆಗೆ ಉಸಿರಾಡುತ್ತಿರುತ್ತಾರೋ ಅಲ್ಲಿಯವರೆಗೆ ಇಂಥವರಿಂದ ತೃಣಮಾತ್ರ ಬದಲಾವಣೆಯು ಸಾಧ್ಯವಿಲ್ಲ, ಇವರನ್ನು ರೇಶಿಮೆಸೀರೆ ಧರಿಸುವ, ಬಂಗಾರದ ಲೋಲಕ್ಕುಗಳನ್ನು ಸರ ಬಳೆಗಳನ್ನು ಧರಿಸುತ್ತಾ ಥಳಥಳ ಹೊಳೆಯುತ್ತಾ ಮೋಹಕವಾಗಿ ತೋರುವ ಹೆಣ್ಣು ರೂಪದ ಗಂಡುಗಳು ಎಂದೇ ಪರಿಭಾವಿಸಬೇಕಾಗುತ್ತದೆ.

ಇದು ನನ್ನ ಭಾರದ, ನೋವಿನ ಅನುಭವ, ಮುಂದಿನ ಪತ್ರದಲ್ಲಿ ಹಗುರವಾದ ಖುಷಿ ಖುಷಿಯಾದ ವಿಚಾರವನ್ನು ಬರೆಯುತ್ತೇನೆ ಆಗದೆ ?

ಇತಿ ನಿನ್ನ

**ಶತಭಿಷಾ**

❋

ತಮ್ಮ ದೇಹದ ಮತ್ತು ಮನಸ್ಸಿನ ಆರೋಗ್ಯಕ್ಕಾಗಿ ಮಹಿಳೆಯರಿಗೆ ಕೆಲಸ ಬೇಕು. ಆಕೆ ಉಣ್ಣಲು, ಉಡಲು, ಆಕೆಯ ಮೇಲೆ ಅವಲಂಬಿತ ಮಕ್ಕಳನ್ನು, ಇತರರನ್ನು ಸಲಹಲು...ಪುರುಷರಿಗೆ ಕೆಲಸ ಮಾಡಲು ಇರುವ ಕಾರಣಗಳೆಲ್ಲವೂ ಮಹಿಳೆಗೆ ಅನ್ವಯವಾಗುತ್ತವೆ.

ಬಾರ್ಬರಾ ಬಾಡಿಕಾನ್ (1827-1891),
ಬ್ರಿಟನ್ನಿನ ಸ್ತ್ರೀ ಮತಾಧಿಕಾರವಾದಿನಿ

## ನೀರ್ಜಾ ಭನೋಟ್ ಪ್ರಶಸ್ತಿಗಳು

(12ನೇ ಪುಟದಿಂದ)

**1993 : ಶಹನಾಸ್ ಶೇಖ್ :** ವಿವಾಹವಾಗಿ ಇನ್ನೂ ಎರಡು ವರ್ಷಗಳೂ ಕಳೆದಿರಲಿಲ್ಲ, ಶಹನಾಸ್ ಳನ್ನು ಆಕೆಯ ಗಂಡನ ಮನೆಯವರು ನಡುರಾತ್ರಿಯ ಹೊತ್ತಿನಲ್ಲಿ ಮನೆಯಿಂದ ಹೊರಹಾಕಿದರು. ಈಕೆ ತನ್ನ ವಿದ್ಯಾಭ್ಯಾಸ ಮುಗಿಸಿ, 'ಆವಾಸ್–ಏ–ನಿಸ್ವಾನ್' ಕೇಂದ್ರವನ್ನು ಸ್ಥಾಪಿಸಿ, ನೂರಾರು ಮಹಿಳೆಯರು ತಮ್ಮ ಮೇಲಿನ ಕೌಟುಂಬಿಕ ದೌರ್ಜನ್ಯ ಹಾಗೂ ಸಾಮಾಜಿಕ ಅನ್ಯಾಯದ ವಿರುದ್ಧ ಎದ್ದು ನಿಲ್ಲಲು ಸ್ಫೂರ್ತಿಯಾಗಿದ್ದಾರೆ.

**1993 : ಪೂರ್ಣಿಮಾ ಸಾಧನ :** ದಿಲ್ಲಿಯ ವಿಮಾನ ನಿಲ್ದಾಣದಲ್ಲಿ ಐ.ಸಿ. 480 ನೆಲಕಪ್ಪಳಿಸಿ ಬಿದ್ದು ಅಪಘಾತಕ್ಕೀಡಾದಾಗ, ಸುಮಾರು ನೂರು ಜನ ಪ್ರಯಾಣಿಕರನ್ನು ಸಾವಿನ ಮುಷ್ಟಿಯಿಂದ ಪಾರು ಮಾಡಿದ ಮಹಿಳೆ.

**1994 : ಭಾನ್ವರಿ ದೇವಿ :** ನಾಲ್ಕು ವರ್ಷಕ್ಕೆ ವಿವಾಹವಾದ ರಾಜಸ್ಥಾನದ ಸಣ್ಣ ಹಳ್ಳಿಯ ಬಡ ಕುಂಬಾರ ಹೆಣ್ಣು ಭಾನ್ವರಿ ದೇವಿ. ದಿನಕ್ಕೆ ಹತ್ತು ರೂಪಾಯಿಯ ದಿನಗೂಲಿಯ ಮೇಲೆ ಕೆಲಸ ಮಾಡುವ ಈಕೆ 'ಮಹಿಳಾ ಅಭಿವೃದ್ಧಿ ಯೋಜನೆ'ಯಲ್ಲಿ ಭಾಗಿಯಾಗಿ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ದುಡಿದರು. ಬಾಲ್ಯ ವಿವಾಹದ ವಿರುದ್ಧ ಹೋರಾಡಿದ ಈಕೆ ಊರ ಪ್ರತಿಷ್ಠಿತರ ಕೋಪಕ್ಕೆ ಗುರಿಯಾದುದಲ್ಲದೆ, ಐದು ಮಂದಿ ರಾಕ್ಷಸರ ಅತ್ಯಾಚಾರಕ್ಕೆ ಬಲಿಯಾದರು. ತನ್ನ ಮೇಲಿನ ದೌರ್ಜನ್ಯವನ್ನು ಮುಚ್ಚಿಡದೆ, ಅಪರಾಧಿಗಳನ್ನು ಬಯಲಿಗೆಳೆಯುವ ಹೋರಾಟದಲ್ಲಿ ಹಳ್ಳಿಯವರ ಹೀನಾಯಕ್ಕೆ, ಉಚ್ಚಾಟಣೆಗೆ ಗುರಿಯಾದರೂ ಮುಂದುವರೆದ ಈಕೆ, ಇಂದಿಗೂ ಮಹಿಳೆ ಮತ್ತು ಮಕ್ಕಳ ಹಿತಕ್ಕಾಗಿ ದುಡಿಯುತ್ತಿರುವ ಮಹಿಳೆ.



---

Reg No. MAG (5) PRC. DEGL 036/89-87
BOOK-POST Periodicals.

To
Smt./Sri

If undelivered please return to:
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-40